ಶ್ರೀ

# ರಾಮಾಯಣ ಸಂಗ್ರಹ

## ಪ್ರಸ್ತಾವನೆ

ಶ್ರೀ ರಾಮಾಯಣ ಸಂಗ್ರಹವನ್ನು 'ಬಾಲರಾಮಾಯಣ'ವೆಂದೂ ಕರೆಯುತ್ತಿದ್ದರೆಂದು ಕೇಳಿದ್ದೇನೆ. ಇದು ಸಂಸ್ಕೃತ ಶಬ್ದ ಮಂಜರಿಯ ಕಡೆಯಲ್ಲಿ ಅಚ್ಚಾಗಿರತಕ್ಕ ಸ್ತೋತ್ರಭಾಗ. ಇದು ಬಾಲಕಬಾಲಿಕಿಯರಿಗೆ ಕಂಠಪಾಠ ಮಾಡಲು ಸುಲಭಶೈಲಿಯಲ್ಲಿ ರಮ್ಯವಾಗಿ ರಚಿಸಲ್ಪಟ್ಟಿರುವ ಚಂಪೂಕಾವ್ಯ. ಇದನ್ನು ರಚಿಸಿದವರು ವೈಯ್ಯಾಕರಣಿ ರಾಮಾನುಜಾಚಾರ್ಯರೆಂಬುದಾಗಿ. ಈ ಸ್ತೋತ್ರದ ಕಡೆಯಲ್ಲಿರುವ ವಿವರದಿಂದ ತಿಳಿಯುತ್ತದೆ. ಈ ವಿದ್ವಾಂಸರು ಯಾವ ಪ್ರಾಂತ್ಯದವರು, ಯಾವ ಕಾಲದವರೆಂದು ತಿಳಿಯುವುದಿಲ್ಲ. ಇವರು ೧೮ ಅಥವಾ ೧೯ನೇ ಶತಮಾನದವರು ಇರಬೇಕೆಂದು, ಶ್ರೀವೈಷ್ಣವರಾದ್ದರಿಂದ ತಮಿಳು ಪ್ರಾಂತ್ಯಕ್ಕೆ ಸೇರಿದ್ದವರೆಂಬುದಾಗಿಯೂ ಊಹಿಸಲು ಸಾಧ್ಯ. ಸಂಸ್ಕೃತದ ಪದಪ್ರಯೋಗ, ವ್ಯಾಕರಣ ವಿಶೇಷಗಳು, ಅಲಂಕಾರಗಳ ರಚನೆಗಳು ಇವು ಸಂಸ್ಕೃತಾಭ್ಯಾಸಿಗಳಿಗೆ ಸುಲಭವಾಗಿ ಮನದಟ್ಟಾಗಬೇಕೆಂಬ ಉದ್ದೇಶದಿಂದಲೇ ಶಬ್ದ ಮಂಜರಿಯ ಕಡೆಯಲ್ಲಿ ಸೇರಿಸಲಾಗಿದ್ದು ಕಾವ್ಯದೃಷ್ಟಿಯಿಂದ ಕಡಿಮೆಯೇನೂ ಅಲ್ಲದ ಓಜಸ್ಸಿನಿಂದ ಕೂಡಿದ ರಚನೆ ಇದಾಗಿದೆ. ಕಿರಿಯರು ತಮ್ಮ ದೈನಂದಿನ ಸ್ತೋತ್ರಪಾಠದೊಂದಿಗೆ ಪ್ರತಿದಿನವೂ ಒಂದೊಂದು ಕಾಂಡದಂತೆ ಇದರ ಅನುಸಂಧಾನ ನಡೆಸಬಹುದು. ಇದರಿಂದ ಸಂಸ್ಕೃತ ಜ್ಞಾನವು ವೃದ್ಧಿಗೊಳ್ಳುವುದರಲ್ಲಿ ಸಂದೇಹವಿಲ್ಲ.

ನನ್ನ ಮಟ್ಟಿಗೆ ಹೇಳಬೇಕೆಂದರೆ ಈ ಶ್ಲೋಕಭಾಗವನ್ನು ನನ್ನ ಮಾತೃಶ್ರೀಯವರು ನನ್ನ ಚಿಕ್ಕಂದಿನಲ್ಲೇ ಬಾಯಿಪಾಠ ಮಾಡಿಸಿ ನನ್ನಿಂದ ಹೇಳಿಸಿ, ಕೇಳಿ ಆನಂದಿಸುತ್ತಿದ್ದರು. ರಾಮನವಮಿ, ವಿಜಯದಶಮಿಗಳಂದು ಇದರ ಪಾರಾಯಣ ಮಾಡಿಸಿ ರಾಮಪಟ್ಟಾಭಿಷೇಕವನ್ನು ಆಚರಿಸುತ್ತಿದ್ದರು. ಈಗಲೂ ಆ ಪದ್ಧತಿ ನಡೆಯುತ್ತಾ ಬಂದಿರುವುದು ಅವರ ಶ್ರದ್ಧೆ, ಆಶೀರ್ವಾದಬಲದಿಂದ. ನನ್ನ ಸಂಸ್ಕೃತ ಭಾಷಾಧ್ಯಯನ ಅಲ್ಪವಾದರೂ ಈ ಕಾವ್ಯಜ್ಞಾನದಿಂದ ನನಗೆ ಸಂಸ್ಕೃತ ಭಾಷೆಯ ಸ್ವಲ್ಪಮಟ್ಟಿನ ತಿಳಿವು ಮೂಡಿದೆ ಎನ್ನಬಹುದು. ನನಗೆ ಒಂದು ಸಂಸ್ಕಾರವೂ ಪ್ರಾಪ್ತವಾಗಿದೆ ಎಂದರೆ ಅತಿಶಯೋಕ್ತಿ ಅಲ್ಲ. ಈ ದಿಶೆಯಲ್ಲಿ ನನಗೆ ಚಿಕ್ಕಂದಿನಿಂದ ಸಂಸ್ಕೃತ ಬೋಧಿಸಿದ ನನ್ನ ಗುರುವರ್ಯರೂ ಮೈಸೂರಿನ ಡಿ. ಬನುಮಯ್ಯ ಶಾಲೆಯ ಅಧ್ಯಾಪಕರೂ ಆಗಿದ್ದ ಕೈ॥ ವಾ॥ ವೇ॥ ಬ್ರ॥ ಶ್ರೀ. ಗಂಗಾಧರಶಾಸ್ತ್ರಿಗಳವರೂ, ನನ್ನ ಮಾತೃಶ್ರೀ ಅವರೂ ನನ್ನ ಕೃತಜ್ಞತಾಪೂರ್ವಕ ವಂದನೆಗಳಿಗೆ ಪಾತ್ರರಾಗಿದ್ದಾರೆ.

ನನಗೆ ಈ ರಾಮಾಯಣ ಸಂಗ್ರಹವನ್ನು ಅರ್ಥತಾತ್ಪರ್ಯಗಳೊಂದಿಗೆ ಕನ್ನಡದಲ್ಲಿ ಮುದ್ರಿಸಿದರೆ ಸಂಸ್ಕೃತ ಭಾಷೆಯನ್ನರಿಯದ ಕನ್ನಡಿಗರಿಗೂ, ನಮ್ಮ ಕಿರಿಯ ಜನಾಂಗಕ್ಕೂ ಪಾರಾಯಣಕ್ಕೂ, ಈ ಕಾವ್ಯದ ಸೊಬಗನ್ನು ಆಸ್ವಾದಿಸಲೂ ಅನುಕೂಲವಾಗುತ್ತದೆ ಎಂದು ಈ ಕೆಲಸ ಮಾಡಬೇಕೆಂಬ ಹಂಬಲ ಬಹುಕಾಲದಿಂದಲೂ ಇದ್ದಿತು. ಅದೀಗ ಕೈಗೂಡುವ ಕಾಲ ಒದಗುತ್ತಿದೆ ಎಂದು ಭಾವಿಸುತ್ತೇನೆ.

ಆತ್ಮೀಯ ಗೆಳೆಯರಾದ ದ್ವೈತ ವೇದಾಂತ ಮತ್ತು ಅಲಂಕಾರ ವಿದ್ವಾಂಸರಾದ ಶ್ರೀ ವಾದಿರಾಜ ವಿ. ಅಗ್ನಿಹೋತ್ರಿಗಳು ಅರ್ಥ ತಾತ್ಪರ್ಯಗಳನ್ನು ಮೊದಲಿನಿಂದಲೂ ಕೂಲಂಕಷವಾಗಿ ಪರಿಶೀಲಿಸಿಕೊಟ್ಟು, ಅದರಲ್ಲಿನ ವ್ಯಾಕರಣ ದೋಷಾದಿಗಳನ್ನೆಲ್ಲಾ ಸರಿಪಡಿಸಿಕೊಟ್ಟು ಬಹಳ ಉಪಕರಿಸಿದ್ದಾರೆ. ಬಹಳ ಅಲ್ಪಕಾಲದಲ್ಲಿಯೇ ಸಮೃದ್ಧ ಆಫ್‌ಸೆಟ್ ಪ್ರಿಂಟರ್ಸ್‌ನ ಅಧಿಕಾರಿಗಳೂ, ಸಿಬ್ಬಂದಿ ವರ್ಗದವರೂ ಅಂದವಾಗಿ ಪುಸ್ತಕವಾಗಿ ಸಿದ್ಧಗೊಳಿಸಿದ್ದಾರೆ. ಇವರಿಗೆಲ್ಲ ನನ್ನ ಕೃತಜ್ಞತಾಪೂರ್ವಕ ನಮನಗಳನ್ನು ಸಲ್ಲಿಸುತ್ತೇನೆ.

ಈ ಪುಸ್ತಕದ ಪ್ರಕಟಣ ಕಾರ್ಯದಲ್ಲಿ ನೆರವಾದ ತಿರುಮಲ ತಿರುಪತಿದೇವಸ್ಥಾನದವರ ದ್ರವ್ಯ ಸಹಾಯವು ಅಮೂಲ್ಯವಾದದ್ದು. ಅವರ ಉದಾರತೆಯನ್ನೂ ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ಇತಿ,

ಎಂ. ಆರ್. ನರಸಿಂಹನ್.

ಜ್ಞಾನಾನಂದಮಯಂ ದೇವಂ ನಿರ್ಮಲ ಸ್ಫಟಿಕಾಕೃತಿಮ್
ಆಧಾರಂ ಸರ್ವವಿದ್ಯಾನಾಂ ಹಯಗ್ರೀವ ಮುಪಾಸ್ಮಹೇ ॥

ಜ್ಞಾನಾನಂದಮಯಂ-ಜ್ಞಾನ ಮತ್ತು ಆನಂದಗಳಿಂದ ಕೂಡಿದವನೂ ನಿರ್ಮಲ-ಪರಿಶುದ್ಧವಾದ ಸ್ಫಟಿಕಾಕೃತಿಮ್-ಸ್ಫಟಿಕದಂತೆ ಕಾಂತಿಯುಕ್ತನಾದ ಶರೀರವುಳ್ಳವನೂ ಸರ್ವವಿದ್ಯಾನಾಂ-ಸಕಲ ವಿದ್ಯೆಗಳಿಗೂ ಆಧಾರಂ-ಆಧಾರನಾದಂತಹ ದೇವಂ-ಸ್ವಾಮಿಯಾದ ಹಯಗ್ರೀವಂ - ಕುದುರೆಯ ಶಿರಸ್ಸನ್ನು ಹೊಂದಿರತಕ್ಕ ಹಯಗ್ರೀವನನ್ನು ಉಪಾಸ್ಮಹೇ-ಧ್ಯಾನಿಸುತ್ತೇವೆ.

ಜ್ಞಾನ ಮತ್ತು ಆನಂದಗಳಿಂದ ಕೂಡಿದವನೂ, ಪರಿಶುದ್ಧವಾದ ಸ್ಫಟಿಕದ ಮೈಕಾಂತಿಯುಳ್ಳವನೂ, ಸಕಲ ವಿದ್ಯೆಗಳಿಗೂ ಆಧಾರಸ್ವರೂಪನೂ ಆದ ಕುದುರೆಯ ಶಿರಸ್ಸನ್ನು ಹೊಂದಿದ ಹಯಗ್ರೀವ ದೇವನನ್ನು ಧ್ಯಾನಿಸುತ್ತೇವೆ.

# ಶ್ರೀ

# ಶ್ರೀ ರಾಮಾಯಣ ಸಂಗ್ರಹ

# ಅಥ ಬಾಲಕಾಂಡಃ

## ಬಾಲಕಾಂಡ

**ಶ್ರೀ ಸೀತಾರಾಮ ಪಾದಾಬ್ಜಾನ್ ಅಭಿವಾದ್ಯ ತನೋಮ್ಯಹಂ**
**ಸುಬೋಧಾಯ ಬಾಲಾನಾಂ ಶ್ರೀ ರಾಮಾಯಣ ಸಂಗ್ರಹಂ ॥೧॥**

ಶ್ರೀ ಸೀತಾರಾಮ-ಶ್ರೀ ಸೀತೆ ಮತ್ತು ರಾಮಚಂದ್ರ ಇವರುಗಳ ಅಥವಾ ಸೀತಾಸಮೇತನಾದ ಶ್ರೀರಾಮಚಂದ್ರನ ಪಾದಾಬ್ಜಾನ್-ಪದಕಮಲಗಳನ್ನು ಅಭಿವಾದ್ಯ-ನಮಸ್ಕರಿಸಿ ಬಾಲಾನಾಂ-ಹುಡುಗರಿಗೆ ಸುಬೋಧಾಯ-ಸುಲಭವಾಗಿ ತಿಳಿದುಕೊಳ್ಳಲು ಸಾಧ್ಯವಾಗುವಂತೆ ಅಹಂ-ನಾನು ಶ್ರೀ ರಾಮಾಯಣ ಸಂಗ್ರಹಂ-ಸಂಗ್ರಹರೂಪವಾದ ಶ್ರೀಮದ್ರಾಮಾಯಣವನ್ನು ತನೋಮಿ-ಮಾಡುತ್ತೇನೆ (ರಚಿಸುತ್ತೇನೆ)

ಶ್ರೀ ಸೀತೆ ಮತ್ತು ರಾಮಚಂದ್ರರ ಅಥವಾ ಸೀತಾಸಮೇತನಾದ ಶ್ರೀ ರಾಮಚಂದ್ರನ ಪದಕಮಲಗಳನ್ನು ವಂದಿಸಿ ಹುಡುಗರಿಗೆ ಸುಲಭವಾಗಿ ತಿಳಿಯಲನುಕೂಲವಾಗುವಂತೆ ಸಂಗ್ರಹರೂಪವಾದ ಶ್ರೀ ರಾಮಾಯಣವನ್ನು ನಾನು ಮಾಡುತ್ತೇನೆ (ರಚಿಸುತ್ತೇನೆ).

**ಆಸೀದಯೋಧ್ಯಾನಗರೀ ದೇಶೇ ಕೋಸಲನಾಮನಿ**
**ತಸ್ಯಾಂ ಶ್ಲಾಘ್ಯಗುಣಃ ಶ್ರೀಮಾನ್ ರಾಜಾ ದಶರಥೋಽವಸತ್ ॥೨॥**

ಕೋಸಲನಾಮನಿ-ಕೋಸಲ ಎನ್ನುವ ಹೆಸರಿನ ದೇಶೇ-ದೇಶದಲ್ಲಿ ಅಯೋಧ್ಯಾ-ಅಯೋಧ್ಯೆ ಎನ್ನುವ ನಗರೀ-ಪಟ್ಟಣವು ಆಸೀತ್-ಇದ್ದಿತು. ತಸ್ಯಾಂ-ಅದರಲ್ಲಿ ಶ್ಲಾಘ್ಯಗುಣಃ-ಪ್ರಶಂಸೆಗೆ ಅರ್ಹವಾದ ಗುಣಗಳುಳ್ಳ ಶ್ರೀಮಾನ್-ಕಾಂತಿಯುತನಾದ ದಶರಥಃ-ದಶರಥನೆಂಬ ಹೆಸರಿನ ರಾಜಾ-ಅರಸನು ಅವಸತ್-ವಾಸವಾಗಿದ್ದನು.

ಕೋಸಲವೆನ್ನುವ ದೇಶದಲ್ಲಿ ಅಯೋಧ್ಯೆಯೆಂಬ ಹೆಸರಿನ ಪಟ್ಟಣವಿದ್ದಿತು. ಅದರಲ್ಲಿ ಪ್ರಶಂಸನೀಯ ಗುಣಗಳಿಂದಲೂ ಮತ್ತು ಕಾಂತಿಯಿಂದಲೂ ಕೂಡಿದ ದಶರಥನೆಂಬ ರಾಜನು ವಾಸವಾಗಿದ್ದನು.

**ಗದ್ಯ ॥ ತಸ್ಯ ಕೌಸಲ್ಯೇತಿ, ಸುಮಿತ್ರೇತಿ, ಕೈಕೇಯೀತಿ ಚ**
**ತಿಸ್ರಃ ಭಾರ್ಯಾಃ ಬಭೂವುಃ ॥**

ತಸ್ಯ-ಅವನಿಗೆ ಕೌಸಲ್ಯೇತಿ-ಕೌಸಲ್ಯೆ ಎನ್ನುವವಳೂ ಸುಮಿತ್ರೇತಿ-ಸುಮಿತ್ರೆ ಎನ್ನುವವಳೂ ಚ-ಮತ್ತು ಕೈಕೇಯೀತಿ-ಕೈಕೇಯಿ ಎನ್ನುವ ತಿಸ್ರಃ-ಮೂವರು ಭಾರ್ಯಾಃ-ಪತ್ನಿಯರು ಬಭೂವುಃ-ಇದ್ದರು.

ಅವನಿಗೆ (ಆ ದಶರಥನಿಗೆ) ಕೌಸಲ್ಯೆ, ಸುಮಿತ್ರೆ ಮತ್ತು ಕೈಕೇಯಿ ಎಂಬ ಮೂವರು ಪತ್ನಿಯರಿದ್ದರು.

ಕೌಸಲ್ಯಾ ಸುಷುವೇ ರಾಮಮಭಿರಾಮಂಗುಣಾಕರಂ
ಶ್ರೀರಾಮಭಕ್ತಿಭರಿತಂ ಭರತಂ ಕೇಕಯಾತ್ಮಜಾ ॥೩॥

ಕೌಸಲ್ಯಾ=ಕೌಸಲ್ಯೆಯು ಗುಣಾಕರಂ=ಗುಣಗಳಿಂದ ಕೂಡಿದ ಅಭಿರಾಮಂ=ಮನೋಹರನಾದ ರಾಮಂ=ರಾಮನೆಂಬುವನನ್ನು ಸುಷುವೇ=ಪ್ರಸವಿಸಿದಳು. ಶ್ರೀರಾಮಭಕ್ತಿಭರಿತಂ=ಶ್ರೀರಾಮನಲ್ಲಿ ಪರಮಭಕ್ತಿಯುಳ್ಳವನಾದ ಭರತಂ=ಭರತನನ್ನು ಕೇಕಯಾತ್ಮಜಾ=ಕೇಕಯ ರಾಜನ ಮಗಳಾದ ಕೈಕೇಯಿಯು ಸುಷುವೇ=ಪ್ರಸವಿಸಿದಳು.

ಕೌಸಲ್ಯೆಯು ಸಕಲಗುಣಗಳಿಂದ ಕೂಡಿದ ಮನೋಹರನಾದ ರಾಮನೆಂಬ ಕುಮಾರನನ್ನು ಪ್ರಸವಿಸಿದಳು. ಕೇಕಯ ರಾಜಕುಮಾರಿಯಾದ ಕೈಕೇಯಿಯು ಶ್ರೀರಾಮನಲ್ಲಿ ಪರಮಭಕ್ತಿಯನ್ನು ಹೊಂದಿದ ಭರತನೆಂಬ ಪುತ್ರನನ್ನು ಪ್ರಸವಿಸಿದಳು.

ಅಥ ಲಕ್ಷ್ಮಣ ಶತ್ರುಘ್ನೌ ಪ್ರಾಸೂಯೇತಾಂ ಸುಮಿತ್ರಯಾ
ಏತೇ ಕುಮಾರಾಶ್ಚತ್ವಾರೋ ವ್ಯವರ್ಧಂತ ದಿನೇ ದಿನೇ ॥೪॥

ಅಥ=ಅನಂತರ ಸುಮಿತ್ರಯಾ=ಸುಮಿತ್ರೆಯಿಂದ ಲಕ್ಷ್ಮಣ ಶತ್ರುಘ್ನೌ=ಲಕ್ಷ್ಮಣ ಶತ್ರುಘ್ನರೆಂಬ ಇಬ್ಬರು ಕುಮಾರರು ಪ್ರಾಸೂಯೇತಾಂ=ಜನಿಸಲ್ಪಟ್ಟರು. ಏತೇ= ಈ ಚತ್ವಾರಃ = ನಾಲ್ಕುರು ಕುಮಾರಾಃ=ಪುತ್ರರೂ ದಿನೇ ದಿನೇ=ದಿನದಿನಕ್ಕೆ ವ್ಯವರ್ಧಂತ=ಬೆಳೆಯುತ್ತ ಬಂದರು.

ಅನಂತರ ಸುಮಿತ್ರೆಯಿಂದ ಲಕ್ಷ್ಮಣ ಶತ್ರುಘ್ನರೆಂಬ ಇಬ್ಬರು ಕುಮಾರರು ಜನಿಸಿದರು. ಈ ನಾಲ್ಕುರು ಬಾಲಕರೂ ದಿನೇದಿನೇ ಬೆಳೆಯುತ್ತ ಬಂದರು.

ಗದ್ಯ ॥ ದಶರಥಸ್ತು ಚೌಲೋಪನಯನಾದೀನ್ಯಥಾಕಾಲಂ
ವಿಧಾಯ ವಿಧೀನಧೀತ ನಿಖಿಲ ವಿದ್ಯಾನುಪಾಧ್ಯಾಯೈರಕಾರಯತ್ ॥

ದಶರಥಸ್ತು=ದಶರಥನಾದರೋ ಚೌಲೋಪನಯನಾದೀನ್=ಚೌಲ ಮತ್ತು ಉಪನಯನ ಇತ್ಯಾದಿ ವಿಧೀನ್=ಕರ್ಮಗಳನ್ನು ಯಥಾಕಾಲಂ=ಆಯಾ ಕಾಲಕ್ಕೆ ತಕ್ಕಂತೆ ವಿಧಾಯ=ನೆರವೇರಿಸಿ ಉಪಾಧ್ಯಾಯೈಃ=ಉಪಾಧ್ಯಾಯರುಗಳಿಂದ ಅಧೀತ ನಿಖಿಲ ವಿದ್ಯಾನ್=ಎಲ್ಲ ವಿದ್ಯೆಗಳನ್ನೂ ಅಭ್ಯಾಸ ಮಾಡಿದವರನ್ನಾಗಿ ಅಕಾರಯತ್=ಮಾಡಿದನು.

ದಶರಥನಾದರೋ ಕಾಲಕಾಲಕ್ಕೆ ಸರಿಯಾಗಿ ಚೌಲ ಉಪನಯನ ಮುಂತಾದ ಕರ್ಮಗಳನ್ನು ನೆರವೇರಿಸಿ ಉಪಾಧ್ಯಾಯರುಗಳಿಂದ ಅವರಿಗೆ ಸಕಲ ವಿದ್ಯೆಗಳನ್ನು ಅಭ್ಯಾಸ ಮಾಡಿಸಿದನು.

ಗದ್ಯ ॥ ಕದಾಚಿದಥ ಯಾಗಸುಧಾಶನ ವಿದ್ವಿಷತ್ಪ್ರಮಥನ ಸತ್ರ
ಪರಿತ್ರಾಣಾಯ ವಿಶ್ವಾಮಿತ್ರ ನಾಮಾ ಮುನಿರಾಗತ್ಯ
ದಶರಥಮಯಾಚತ ರಾಮಂ ಸಲಕ್ಷ್ಮಣಂ ॥

ಅಥಕದಾಚಿತ್=ಅನಂತರದಲ್ಲಿ, ಒಂದು ದಿನ ವಿಶ್ವಾಮಿತ್ರ ನಾಮಾ=ವಿಶ್ವಾಮಿತ್ರನೆಂಬ ಹೆಸರಿನ ಮುನಿ=ಋಷಿಯು ದಶರಥಂ=ದಶರಥನನ್ನು ಉಪಾಗಮ್ಯ=ಸಮೀಪಿಸಿ ಯಾತುಧಾನ ವಿಧ್ವಂಸ್ಯಮಾನ=ರಾಕ್ಷಸರಿಂದ ನಾಶಗೊಳಿಸಲ್ಪಡುವ ಸತ್ರಪರಿತ್ರಾಣಾಯ=ಯಾಗದ ರಕ್ಷಣೆಗೋಸ್ಕರ ಸಲಕ್ಷ್ಮಣಂ ರಾಮಂ=ಲಕ್ಷ್ಮಣ ಸಮೇತನಾದ ರಾಮಚಂದ್ರನನ್ನು ಅಯಾಚತ=ಯಾಚಿಸಿದನು.(ಕೇಳಿದನು).

ಹೀಗೆಯೇ ಇರುವಾಗ ಒಮ್ಮೆ ವಿಶ್ವಾಮಿತ್ರನೆಂಬ ಮಹರ್ಷಿಯು ದಶರಥನ ಬಳಿಗೆ ಬಂದು ರಾಕ್ಷಸರಿಂದ ನಾಶಗೊಳ್ಳುವ ಯಾಗಕ್ಕೆ ರಕ್ಷಣೆ ಮಾಡಲು ಲಕ್ಷ್ಮಣ ಸಮೇತನಾದ ರಾಮಚಂದ್ರನನ್ನು ಕಳುಹಿಸಲು ಬೇಡಿಕೊಂಡನು.

ಪ್ರಾಹಿಣೋನ್ಮುನಿಸಂತ್ರಾಸಾತ್ ಪ್ರಿಯಾವಪಿಸುತೌ ನೃಪಃ
ಸರಾಜಪುತ್ರಾವನಯದಟವೀಂ ಕಥಯನ್ ಕಥಾಃ ॥೫॥

ನೃಪಃ=ರಾಜನು ಮುನಿಸಂತ್ರಾಸಾತ್=ಮುನಿಯ ಮೇಲಿನ ಭಯದಿಂದ ಪ್ರಿಯೌಅಪಿ=ಪ್ರೀತಿಪಾತ್ರರಾದರೂ ಕೂಡ ಸುತೌ=ಮಕ್ಕಳಿಬ್ಬರನ್ನೂ ಪ್ರಾಹಿಣೋತ್=ಕಳುಹಿಸಿಕೊಟ್ಟನು. ಸಃ=ಆ ಮುನಿಯು ಕಥಾಃ=ಕತೆಗಳನ್ನು ಕಥಯನ್=ಹೇಳುತ್ತಾ ರಾಜಪುತ್ರೌ=ಇಬ್ಬರು ರಾಜಕುಮಾರರನ್ನೂ ಅಟವೀಂ ಪ್ರತಿ=ಕಾಡನ್ನು ಕುರಿತು ಅನಯತ್=ಕರೆದುಕೊಂಡು ಹೋದನು.

ಮುನಿವರನ ಮೇಲಿನ ಭಯದಿಂದ ತನಗೆ ಅತ್ಯಂತ ಪ್ರೀತಿಪಾತ್ರರಾದಾಗ್ಯೂ ಕೂಡ ರಾಜನು ಮಕ್ಕಳಿಬ್ಬರನ್ನೂ ಕಳುಹಿಸಿಕೊಟ್ಟನು. ಆ ಮುನಿಯು ಅವರಿಗೆ ಕಥೆಗಳನ್ನು ಹೇಳುತ್ತಾ ಕಾಡಿಗೆ ಕರೆದುಕೊಂಡು ಹೋದನು.

ಸತ್ಯಪ್ಯರಣ್ಯಸಂಚಾರೇ ಶ್ರಮಸ್ಯಾನುದಯಾಯ ಸಃ
ಉಪಾದಿಶತ್ತಯೋರ್ವಿದ್ಯೇ ಬಲಾಮತಿಬಲಾಮಪಿ ॥೬॥

ಸಃ=ಆ ಮುನಿಯು ಅರಣ್ಯಸಂಚಾರೇ=ಕಾಡಿನಲ್ಲಿ ಸಂಚಾರವು ಸತಿ ಅಪಿ=ಮಾಡಲ್ಪಟ್ಟರೂ ಕೂಡ ಶ್ರಮಸ್ಯ ಅನುದಯಾಯ=ಶ್ರಮದಿಂದ ಬಳಲದೇ ಇರಲು ತಯೋಃ=ಅವರಿಗೆ ಬಲಾಂ ಅತಿಬಲಾಂ ಅಪಿ=ಬಲ ಮತ್ತು ಅತಿಬಲ ಎಂಬ ವಿದ್ಯೇ=ಎರಡು ವಿದ್ಯೆಗಳನ್ನು ಉಪಾದಿಶತ್=ಉಪದೇಶಿಸಿದನು.

ಆ ಮುನಿಯು ಅರಣ್ಯ ಸಂಚಾರ ಮಾಡಿದರೂ ಕೂಡ ಆಯಾಸದಿಂದ ಬಳಲದೇ ಇರಲು ಇವರಿಗೆ ಬಲ ಮತ್ತು ಅತಿಬಲ ಎನ್ನುವ ಎರಡು ವಿದ್ಯೆಗಳನ್ನು ಉಪದೇಶಿಸಿದನು.

ಗದ್ಯ ॥ ವನಮಧ್ಯೇಗಚ್ಛತಾಂ ಏತೇಷಾಂ ಪದವೀಂ ತಾಟಕಾ-
ನಾಮರಾಕ್ಷಸೀ ರುರೋಧ ॥

ವನಮಧ್ಯೇ=ಕಾಡಿನ ನಡುವೆ ಗಚ್ಛತಾಂ=ಹೋಗುತ್ತಿದ್ದ ಏತೇಷಾಂ=ಇವರುಗಳ ಪದವೀಂ=ಮಾರ್ಗವನ್ನು ತಾಟಕಾ ನಾಮ ರಾಕ್ಷಸೀ=ತಾಟಕಿಯೆಂಬ ಹೆಸರಿನ ರಾಕ್ಷಸಿಯು ರುರೋಧ=ತಡೆದಳು.

ಕಾಡಿನ ಮಧ್ಯೆ ಹೋಗುತ್ತಿದ್ದ ಇವರ ಮಾರ್ಗವನ್ನು ತಾಟಕಿ ಎನ್ನುವ ರಾಕ್ಷಸಿಯು ತಡೆದಳು.

ಗದ್ಯ ॥ ಸ್ತ್ರಿಯಮಪಿ ಜಗದಪಕಾರಿಣೀಂ ತಾಂ ದಾಶರಥಿಃ
ಗಾಧಿತನಯಾನುಮತ್ಯಾ ವ್ಯಾಪಾದಯಾ ಮಾಸ ॥

ಸ್ತ್ರಿಯಮಪಿ-ಸ್ತ್ರೀಯಾದರೂ ಕೂಡ ಜಗದಪಕಾರಿಣೀಂ-ಪ್ರಪಂಚಕ್ಕೆ ಅಪಕಾರವನ್ನುಂಟುಮಾಡುತ್ತಿದ್ದ ತಾಂ-ಅವಳನ್ನು ದಾಶರಥಿಃ-ದಶರಥನ ಮಗನಾದ ರಾಮಚಂದ್ರನು ಗಾಧಿತನಯಾನುಮತ್ಯಾ-ಗಾಧಿಪುತ್ರನಾದ ವಿಶ್ವಾಮಿತ್ರನ ಅನುಮತಿಯಿಂದ ವ್ಯಾಪಾದಯಾ ಮಾಸ-ಸಂಹರಿಸಿದನು.

ಹೆಂಗಸಾದರೂ ಕೂಡ ಪ್ರಪಂಚಕ್ಕೆ ಅಪಕಾರವನ್ನು ಉಂಟುಮಾಡುತ್ತಿದ್ದುದರಿಂದ ಆ ರಾಕ್ಷಸಿಯನ್ನು ದಶರಥ ಪುತ್ರನಾದ ರಾಮಚಂದ್ರನು ಗಾಧಿರಾಜಕುಮಾರ ವಿಶ್ವಾಮಿತ್ರನ ಅನುಜ್ಞೆಯಂತೆ ಸಂಹರಿಸಿದನು.

ಅಸ್ತ್ರಾಣಿ ಜೃಂಭಕಾದೀನಿ ತಪಸ್ವೀ ತಯೋಸ್ತತಃ
ಉಪದಿಶ್ಯ ಪ್ರವಿಶ್ಯ ಸ್ವಂ ಆಶ್ರಮಂ ಕುರ್ವತಿ ಕ್ರತುಂ ॥೭॥
ಶೂರೌ ಸುಬಾಹು ಮಾರೀಚೌ ಶೈಲಶೋಣಿತ ವರ್ಷಿಣೌ
ರಕ್ಷೋಭಿಸ್ಸಹ ಸಂಕ್ಷೋಭಂ ಚಕ್ರತುಸ್ತಾಟಕಾಸುತೌ ॥೮॥

ತತಃ-ಅನಂತರ ಜೃಂಭಕಾದೀನಿ-ಜೃಂಭಕ ಮೊದಲಾದ ಅಸ್ತ್ರಾಣಿ -ಅಸ್ತ್ರಗಳನ್ನು ತಯೋಃ-ಅವರಿಗೆ ಉಪದಿಶ್ಯ-ಉಪದೇಶಿಸಿ ತಪಸ್ವಿನಿ-ಮುನಿವರನಾದ ವಿಶ್ವಾಮಿತ್ರನು ಸ್ವಂ-ತನ್ನ ಆಶ್ರಮಂ-ಆಶ್ರಮವನ್ನು ಪ್ರವಿಶ್ಯ-ಪ್ರವೇಶಿಸಿ ಕ್ರತುಂ-ಯಜ್ಞವನ್ನು ಕುರ್ವತಿಸತಿ-ಮಾಡುವ ಸಮಯದಲ್ಲಿ;

ಶೂರೌ-ವೀರರಾದ ತಾಟಕಾಸುತೌ-ತಾಟಕಿಯ ಮಕ್ಕಳಾದ, ಸುಬಾಹು ಮಾರೀಚೌ-ಸುಬಾಹು ಮಾರೀಚರು ಶೈಲ-ಬಂಡೆ ಶೋಣಿತ-ರಕ್ತ (ಮುಂತಾದವುಗಳನ್ನು) ವರ್ಷಿಣೌ-ಸುರಿಸುತ್ತಿರುವ ರಕ್ಷೋಭಿಸ್ಸಹ-ರಾಕ್ಷಸರೊಡನೆ ಕೂಡಿಕೊಂಡು ಸಂಕ್ಷೋಭಂ-ಕ್ಷೋಭೆಯನ್ನು ಚಕ್ರತುಃ-ಉಂಟು ಮಾಡಿದರು.

ಅನಂತರ ಜೃಂಭಕಾದಿ ಅಸ್ತ್ರಗಳನ್ನು ಅವರಿಗೆ ಉಪದೇಶಿಸಿ ಮುನಿವರನಾದ ವಿಶ್ವಾಮಿತ್ರನು ತನ್ನ ಆಶ್ರಮವನ್ನು ಪ್ರವೇಶಿಸಿ ಯಜ್ಞವನ್ನು ಮಾಡುತ್ತಿರುವಾಗ ವೀರರಾದ, ತಾಟಕಿಯ ಮಕ್ಕಳಾದ, ಸುಬಾಹು ಮಾರೀಚರುಗಳು ಬಂಡೆಗಳನ್ನೂ ರಕ್ತವನ್ನೂ ಸುರಿಸುತ್ತ ರಾಕ್ಷಸರನ್ನು ಕೂಡಿಕೊಂಡು ಕ್ಷೋಭೆಯನ್ನು ಉಂಟು ಮಾಡಿದರು.

ಗದ್ಯ ॥ ದಾಶರಥಿಸ್ತು ಮಾನವಾಸ್ತ್ರೇಣ ಮಾರೀಚಮಪಾಸ್ಯ-
[illegible] ಸುಬಾಹು ಪ್ರಮುಖಾನ್ [illegible]
[illegible] ॥

ದಾಶರಥಿಸ್ತು-ದಶರಥನ ಮಗನಾದ ರಾಮಚಂದ್ರನಾದರೋ ಮಾನವಾಸ್ತ್ರ-

ಸ್ತ್ರೇಣ- ವಾಯುವ್ಯಾಸ್ತ್ರದಿಂದ ಮಾರೀಚಂ- ಮಾರೀಚನನ್ನು ಅರ್ಣವೇ-ಸಮುದ್ರದಲ್ಲಿ ನಿಪಾತ್ಯ-ಬೀಳಿಸಿ ಸುಬಾಹು ಪ್ರಮುಖ-ಸುಬಾಹು ಮುಂತಾದ ಮುಖ್ಯ ಕೌಣಪಗಣಂ- ರಾಕ್ಷಸರ ಗುಂಪನ್ನು ಏಕೇನ ಬಾಣೇನ-ಒಂದೇ ಬಾಣದಿಂದ ಲೀಲಯೈವ-ಲೀಲಾಜಾಲವಾಗಿ ಸೂದಯಾಮಾಸ-ಸಂಹಾರ ಮಾಡಿದನು.

ದಶರಥನ ಮಗನಾದ ರಾಮಚಂದ್ರನು ವಾಯುವ್ಯಾಸ್ತ್ರದಿಂದ ಮಾರೀಚನನ್ನು ಸಮುದ್ರದಲ್ಲಿ ಬೀಳಿಸಿ, ಸುಬಾಹು ಮುಂತಾದ ರಾಕ್ಷಸರ ಗುಂಪನ್ನು ಒಂದೇ ಬಾಣದಿಂದ ಲೀಲಾಜಾಲವಾಗಿ ಸಂಹಾರ ಮಾಡಿದನು.

ಗದ್ಯ ॥ ವಿಶ್ವಾಮಿತ್ರಸ್ತು ನಿರಂತರಾಯಂ ಪರಿಸಮಾಪ್ಯ ಸಪ್ತತಂತುಂ
ರಘುಸುತಾಯ ಜನಕಸುತಾಂ ದಿದಾಪಯಿಷುಃ ಮಿಥಿಲಾಂ
ಪ್ರತಿಪ್ರತಸ್ಥೇ ॥

ವಿಶ್ವಾಮಿತ್ರಸ್ತು-ವಿಶ್ವಾಮಿತ್ರನಾದರೋ ಸಪ್ತತಂತುಂ-ಯಜ್ಞವನ್ನು ನಿರಂತರಾಯಂ- ನಿರಾತಂಕದಿಂದ ಪರಿಸಮಾಪ್ಯ-ಸಂಪೂರ್ಣ ಮಾಡಿ ರಘುಸುತಾಯ-ರಘುವಂಶ ಕುಮಾರ ನಾದ ರಾಮಚಂದ್ರನಿಗೆ ಜನಕಸುತಾಂ-ಜನಕರಾಜಕುಮಾರಿಯಾದ ಸೀತೆಯನ್ನು ದಿದಾ ಪಯಿಷುಃ-ಕೊಡಿಸಲು ಇಚ್ಛೆಯುಳ್ಳವನಾಗಿ ಮಿಥಿಲಾಂಪ್ರತಿ-ಮಿಥಿಲೆಯನ್ನು ಕುರಿತು ಪ್ರತಸ್ಥೇ-ಪ್ರಯಾಣ ಮಾಡಿದನು.

ವಿಶ್ವಾಮಿತ್ರನೂ ಕೂಡ ಯಜ್ಞವನ್ನು ತೊಂದರೆಯಿಲ್ಲದೆ ಸಂಪೂರ್ಣಗೊಳಿಸಿ ರಘುವಂಶ ಕುಮಾರನಾದ ರಾಮನಿಗೆ ಜನಕರಾಜಕುಮಾರಿ ಸೀತೆಯನ್ನು ಮದುವೆ ಮಾಡಿಸಬೇಕೆಂಬ ಇಚ್ಛೆಯುಳ್ಳವನಾಗಿ ಜನಕರಾಜನ ರಾಜಧಾನಿಯಾದ ಮಿಥಿಲಾ ಪಟ್ಟಣವನ್ನು ಕುರಿತು ಪ್ರಯಾಣ ಮಾಡಿದನು.

ರಾಮಪಾದರಜಸ್ಸಂಗಾತ್ ಪ್ರಕೃತಿಂಗತಯಾಪಥಿ
ಅಹಲ್ಯಯಾ ಗೌತಮಸ್ಯ ಜಾಯಯಾ ಅಯಮಪೂಜ್ಯತ ॥೯॥

ಪಥಿ-ದಾರಿಯಲ್ಲಿ ರಾಮಪಾದರಜಸ್ಸಂಗಾತ್-ರಾಮನ ಪಾದಧೂಳಿಯ ಸ್ಪರ್ಶದ ದೆಸೆಯಿಂದ ಪ್ರಕೃತಿಂ-ಸಹಜ ರೂಪವನ್ನು ಗತಯಾ-ಹೊಂದಿದ ಗೌತಮಸ್ಯ-ಗೌತಮ ಮುನಿಯ ಜಾಯಯಾ-ಹೆಂಡತಿಯಾದ ಅಹಲ್ಯಯಾ-ಅಹಲ್ಯೆಯಿಂದ ಅಯಂ-ಶ್ರೀ ರಾಮಚಂದ್ರನು ಅಪೂಜ್ಯತ-ಪೂಜಿಸಲ್ಪಟ್ಟನು.

ದಾರಿಯಲ್ಲಿ ರಾಮಚಂದ್ರನ ತನ್ನ ಪಾದಧೂಳಿಯ ಸ್ಪರ್ಶದಿಂದ ನಿಜವಾದ ರೂಪವನ್ನು ಧರಿಸಿದ ಗೌತಮ ಮಹರ್ಷಿಯ ಪತ್ನಿ ಅಹಲ್ಯೆಯಿಂದ ಪೂಜಿಸಲ್ಪಟ್ಟನು.

ಗದ್ಯ ॥ ತದನು ಮಿಥಿಲಾಂ ಪ್ರವಿಶ್ಯ ಪರಿಗೃಹೀತಾತಿಥ್ಯಃ
[illegible]
[illegible] ॥

ತದನು-ನಂತರ ಮಿಥಿಲಾಂ ಪ್ರವಿಶ್ಯ-ಮಿಥಿಲಾ ಪಟ್ಟಣವನ್ನು ಪ್ರವೇಶಿಸಿ

ಪರಿಗೃಹೀತ-ಸ್ವೀಕರಿಸಲ್ಪಟ್ಟ ಆತಿಥ್ಯಃ- ಆತಿಥ್ಯವುಳ್ಳ ಕೌಶಿಕೇ-ವಿಶ್ವಾಮಿತ್ರನು ನಿಜಾಗಮನ ಕಾರಣಂ-ತನ್ನ ಆಗಮನದ ಕಾರಣವನ್ನು ಆವೇದಯತಿ ಸತಿ-ತಿಳಿಸುತ್ತಿರಲಾಗಿ ಜನಕೇನ-ಮಹಾರಾಜ ಜನಕನಿಂದ ಪ್ರದರ್ಶಿತಂ-ತೋರಿಸಲ್ಪಟ್ಟ ಶಿವಶರಾಸನಂ-ಶಿವಧನುಸ್ಸನ್ನು ದಶರಥಾತ್ಮಜಃ- ದಶರಥನ ಮಗನಾದ ರಾಮಚಂದ್ರನು ಬಭಂಜ-ಮುರಿದು ಹಾಕಿದನು.

ಅನಂತರ ಮಿಥಿಲಾ ಪಟ್ಟಣವನ್ನು ಪ್ರವೇಶಿಸಿ ಆತಿಥ್ಯವನ್ನು ಸ್ವೀಕರಿಸಿದ ಕೌಶಿಕ ಪುತ್ರ ವಿಶ್ವಾಮಿತ್ರನು ತಾನು ಬಂದ ಕಾರಣವನ್ನು ತಿಳಿಸಲು, ಮಹಾರಾಜ ಜನಕನಿಂದ ಪ್ರದರ್ಶಿಸಲ್ಪಟ್ಟ ಶಿವಧನುಸ್ಸನ್ನು ದಶರಥ ಸುತನಾದ ರಾಮಚಂದ್ರನು ಮುರಿದು ಹಾಕಿದನು.

ಜಾತಾನಂದಸ್ತು ಜನಕೋ ದೂತೈಸ್ತ್ವರಿತಗಾಮಿಭಿಃ
ಆಹ್ವಾಪಯದ್ದಶರಥಂ ಸಕುಟುಂಬ ಪುರೋಧಸಂ ॥೧೦॥

ಜಾತಾನಂದಃ-ಉಂಟಾದ ಆನಂದವುಳ್ಳ ಜನಕಸ್ತು-ಜನಕನಾದರೋ ತ್ವರಿತಗಾಮಿಭಿಃ -ಶೀಘ್ರಗಾಮಿಗಳಾದ ದೂತೈಃ-ದೂತರಿಂದ ಸಕುಟುಂಬ ಪುರೋಧಸಂ-ಕುಟುಂಬ ಮತ್ತು ಪುರೋಹಿತರ ಸಮೇತನಾದ ದಶರಥಂ-ದಶರಥನನ್ನು ಆಹ್ವಾಪಯತ್-ಕರೆಸಿದನು.

ಮಹದಾನಂದ ಉಂಟಾದ ಜನಕನಾದರೋ ಶೀಘ್ರಗಾಮಿಗಳಾದ ದೂತರ ಮೂಲಕ ಕುಟುಂಬ ಮತ್ತು ಪುರೋಹಿತರ ಸಹಿತವಾಗಿ ದಶರಥನನ್ನು ಕರೆಸಿದನು.

ಅಥೋತ್ತಮೇ ಮುಹೂರ್ತೇ ಸ ರಾಮಾಯ ಧರಣೀಸುತಾಂ
ಸೀತಾಮದಾತ್ ಆತ್ಮಸುತಾಂ ಊರ್ಮಿಳಾಂ ಲಕ್ಷ್ಮಣಾಯ ಚ ॥೧೧॥

ಅಥ-ಅನಂತರ ಉತ್ತಮೇ-ಉತ್ತಮವಾದ ಮುಹೂರ್ತೇ-ಮುಹೂರ್ತದಲ್ಲಿ ಸಃ -ಆ ಜನಕ ಮಹಾರಾಜನು ಧರಣೀಸುತಾಂ-ಭೂಮಿಜಾತೆಯಾದ ಸೀತಾಂ-ಸೀತೆಯನ್ನು ರಾಮಾಯ-ರಾಮನಿಗೆ ಚ-ಮತ್ತು ಆತ್ಮಸುತಾಂ-ತನ್ನ ಮಗಳಾದ ಊರ್ಮಿಳಾಂ-ಊರ್ಮಿಳೆಯನ್ನು ಲಕ್ಷ್ಮಣಾಯ-ಲಕ್ಷ್ಮಣನಿಗೆ ಅದಾತ್-ಕೊಟ್ಟನು (ಮದುವೆ ಮಾಡಿದನು.)

ಅನಂತರದಲ್ಲಿ ಶ್ರೇಷ್ಠವಾದ ಮುಹೂರ್ತದಲ್ಲಿ ಆ ಜನಕ ಮಹಾರಾಜನು ಭೂಜಾತೆಯಾದ ಸೀತೆಯನ್ನು ರಾಮಚಂದ್ರನಿಗೂ ಮತ್ತು ತನ್ನ ಮಗಳಾದ ಊರ್ಮಿಳೆಯನ್ನು ಲಕ್ಷ್ಮಣನಿಗೂ ಕೊಟ್ಟು ವಿವಾಹ ಮಾಡಿದನು.

ಗದ್ಯ ॥ ಅಥ ನಿಜಾನುಜಸ್ಯ ಕುಶಧ್ವಜಸ್ಯ ತನುಜೇ ಮಾಂಡವೀ
ಶ್ರುತಕೀರ್ತೀ ಭರತ ಶತ್ರುಘ್ನಾಭ್ಯಾಂಚ ದತ್ವಾ ಶುಭೇ
ಹನಿ ವಿವಾಹಮಕರೋತ್ ।

ಅಥ-ಅನಂತರ ನಿಜಾನುಜಸ್ಯ-ತನ್ನ ಸಹೋದರನಾದ ಕುಶಧ್ವಜಸ್ಯ-ಕುಶಧ್ವಜ [illegible] ತನುಜೇ-ಕುಮಾರಿಯರಾದ ಮಾಂಡವೀ ಶ್ರುತಕೀರ್ತೀ-ಮಾಂಡವಿ ಶ್ರುತಕೀರ್ತಿಯರನ್ನು ಭರತ ಶತ್ರುಘ್ನಾಭ್ಯಾಂಚ-ಭರತ ಮತ್ತು ಶತ್ರುಘ್ನರಿಗೆ ದತ್ವಾ-ಕೊಟ್ಟು ಶುಭೇ ಅಹನಿ-ಶುಭವಾದ ದಿನದಲ್ಲಿ ವಿವಾಹಂ-ಮದುವೆಯನ್ನು ಅಕರೋತ್-ಮಾಡಿದನು.

ಅನಂತರದಲ್ಲಿ ತನ್ನ ಸಹೋದರ ಕುಶಧ್ವಜನ ಮಕ್ಕಳಾದ ಮಾಂಡವೀ, ಶ್ರುತಕೀರ್ತಿ ಎಂಬುವವರನ್ನು ಭರತ ಮತ್ತು ಶತ್ರುಘ್ನರಿಗೆ ಕೊಟ್ಟು ಶುಭದಿವಸದಲ್ಲಿ ಮದುವೆ ಮಾಡಿದನು.

ಅಥಾನುರೂಪಜಾಯಾಭಿರುಪೇತೈಸ್ತನಯೈಸ್ಸಹ
ಪ್ರತಸ್ಥೇ ಕೋಸಲಪತಿಸ್ಸಾಕೇತ ನಗರಂ ನಿಜಂ ॥೧೨॥

ಅಥ=ಅನಂತರ ಅನುರೂಪಜಾಯಾಭಿಃ=ಅನುರೂಪೆಯರಾದ ಪತ್ನಿಯರಿಂದ ಉಪೇತೈಃ=ಒಡಗೂಡಿದ ತನಯೈಃಸಹ=ಮಕ್ಕಳುಗಳ ಜೊತೆಯಲ್ಲಿ ಕೋಸಲಪತಿಃ=ಕೋಸಲ ದೇಶಕ್ಕೆ ಅಧಿಪತಿಯಾದ ದಶರಥನು ನಿಜಂ ನಗರಂ=ತನ್ನ ಪಟ್ಟಣವಾದ ಸಾಕೇತಂ=ಸಾಕೇತ ವೆಂದು ಪ್ರಸಿದ್ಧವಾದ ಅಯೋಧ್ಯೆಯನ್ನು ಕುರಿತು ಪ್ರತಸ್ಥೇ=ಹೊರಟನು.

ಅನಂತರ ಅನುರೂಪೆಯರಾದ ಪತ್ನಿಯರನ್ನು ಒಡಗೂಡಿದ ಮಕ್ಕಳ ಜೊತೆಯಲ್ಲಿ ಕೋಸಲಾಧಿಪತಿ ದಶರಥನು ತನ್ನ ಪಟ್ಟಣವಾದ ಸಾಕೇತ(ಅಯೋಧ್ಯೆ)ಕ್ಕೆ ಹೊರಟನು.

ಜಿಗೀಷಯಾಗತಂ ರಾಮಂ ಭಾರ್ಗವಂ ರಘುವಂಶಜಃ
ರಾಮೋಜಿಗಾಯ ಜಯಿನಂ ಆಲಿಲಿಂಗ ನೃಪಸ್ಸುತಂ ॥೧೩॥

ರಘುವಂಶಜಃ=ರಘುವಂಶದಲ್ಲಿ ಹುಟ್ಟಿದ ರಾಮಃ=ರಾಮನು ಜಿಗೀಷಯಾ=ತನ್ನನ್ನು ಜಯಿಸಬೇಕೆಂಬ ಆಸೆಯಿಂದ ಆಗತಂ=ಬಂದ ಭಾರ್ಗವಂ=ಭೃಗು ಋಷಿಯ ಮಗನಾದ ರಾಮಂ=ಪರಶುರಾಮನನ್ನು ಜಿಗಾಯ=ಜಯಿಸಿದನು. ನೃಪಃ=ರಾಜನಾದ ದಶರಥನು ಜಯಿನಂ=ಜಯಶಾಲಿಯಾದ ಸುತಂ=ಮಗನನ್ನು ಆಲಿಲಿಂಗ=ಆಲಂಗಿಸಿಕೊಂಡನು.

ರಘುಸುತನಾದ ಶ್ರೀರಾಮನನ್ನು ಜಯಿಸಬೇಕೆಂಬ ಆಸೆಯಿಂದ ಆಗಮಿಸಿದ ಭೃಗು ಋಷಿಯ ಕುಮಾರ ಪರಶುರಾಮನನ್ನು ಜಯಿಸಿದನು. ವಿಜಯಿಯಾದ ಮಗನನ್ನು ದಶರಥನು ಆಲಂಗಿಸಿಕೊಂಡನು.

ಅಥಪ್ರವಿಶ್ಯನಗರಂ ಸಾಕೇತಂ ರಘುನಂದನಃ
ಸೀತಯಾರಮಮಾಣಸ್ಸನ್ ಸಂತೋಷಂ ಸಮವಿಂದತ ॥೧೪॥

ಅಥ=ಅನಂತರ ರಘುನಂದನಃ=ರಘುಸುತನಾದ ರಾಮಚಂದ್ರನು ಸಾಕೇತನಗರಂ=ಸಾಕೇತ ನಗರಿಯನ್ನು ಪ್ರವಿಶ್ಯ=ಪ್ರವೇಶಿಸಿ ಸೀತಯಾ=ಸೀತೆಯ ಜೊತೆ ರಮಮಾಣಸ್ಸನ್=ವಿಹರಿಸುತ್ತಾ ಸಂತೋಷಂ=ಸಂತೋಷವನ್ನು ಸಮವಿಂದತ=ಹೊಂದಿದನು.

ನಂತರ ಶ್ರೀರಾಮಚಂದ್ರನು ಸಾಕೇತ ನಗರವನ್ನು ಸೇರಿ ಪತ್ನಿಯಾದ ಸೀತೆಯೊಡನೇ ವಿಹರಿಸುತ್ತಾ ಸಂತೋಷವಾಗಿದ್ದನು.

ಇತಿ ಬಾಲಕಾಂಡಃ ಸಮಾಪ್ತಃ

ಬಾಲಕಾಂಡವು ಸಮಾಪ್ತಿಯಾಯಿತು.

# ಅಥ ಅಯೋಧ್ಯಾಕಾಂಡಃ

# ಅಯೋಧ್ಯಾಕಾಂಡ

**ತತೋಭರತ ಶತ್ರುಘ್ನೌ ತಾತಾ ದೇಶೇನ ಜಗ್ಮತುಃ**
**ಯುಧಾಜಿದಭಿಧಾನಸ್ಯ ಮಾತುಲಸ್ಯ ಪುರಂಪ್ರತಿ ॥೧॥**

ತತಃ=ಅನಂತರ ತಾತಾದೇಶೇನ=ತಂದೆಯ ಅಪ್ಪಣೆಯಂತೆ. ಭರತ ಶತ್ರುಘ್ನೌ=ಭರತ ಶತ್ರುಘ್ನರು ಯುಧಾಜಿದಭಿಧಾನಸ್ಯ=ಯುಧಾಜಿತ್ ಎನ್ನುವ ಹೆಸರಿನ ಮಾತುಲಸ್ಯ=ಸೋದರಮಾವನ ಪುರಂ ಪ್ರತಿ=ಪಟ್ಟಣವನ್ನು ಕುರಿತು ಜಗ್ಮತುಃ=ಹೋದರು (ಪ್ರಯಾಣ ಬೆಳೆಸಿದರು).

ನಂತರ ತಂದೆಯ ಆದೇಶದಂತೆ ಭರತ ಶತ್ರುಘ್ನರಿಬ್ಬರೂ ಯುಧಾಜಿತ್ ಎನ್ನುವ ತಮ್ಮ ಸೋದರಮಾವನ ಊರಿಗೆ ಪ್ರಯಾಣ ಬೆಳಸಿದರು.

**ರಾಮಾಭಿಷೇಚನಂ ಕರ್ತುಂ ಯತಮಾನಂ ಮಹೀಪತಿಮ್**
**ಮಂಥರಾಕುಲಿತ ಸ್ವಾಂತಾ ಕೈಕೇಯಿೞ ದುರ್ವಚೋಽಬ್ರವೀತ್ ॥೨॥**

ಮಂಥರಾಕುಲಿತ=ಮಂಥರೆಯೆಂಬುವ ದಾಸಿಯ ಮೂಲಕ ಕ್ಷೋಭೆಗೊಂಡ ಸ್ವಾಂತಾ=ಮನಸ್ಸುಳ್ಳ ಕೈಕೇಯಿೞ=ಕೈಕೇಯಿಯು ರಾಮಾಭಿಷೇಚನಂ=ರಾಮನ ಪಟ್ಟಾಭಿಷೇಕವನ್ನು ಕರ್ತುಂ=ಮಾಡಬೇಕೆಂದು ಯತಮಾನಂ=ಪ್ರಯತ್ನಿಸುತ್ತಿದ್ದ ಮಹೀಪತಿಂ ಪ್ರತಿ=ರಾಜನಾದ ದಶರಥನನ್ನು ಕುರಿತು ದುರ್ವಚಃ=ಕೆಟ್ಟ ಮಾತುಗಳನ್ನು ಅಬ್ರವೀತ್=ಹೇಳಿದಳು.

ಮಂಥರೆ ಎನ್ನುವ ದಾಸಿಯ ಮೂಲಕ ಚಿತ್ತಕ್ಷೋಭೆಗೊಂಡ ಕೈಕೇಯಿಯು ರಾಮನ ಪಟ್ಟಾಭಿಷೇಕವನ್ನು ಮಾಡಬೇಕೆಂದು ಪ್ರಯತ್ನಿಸುತ್ತಿದ್ದ ರಾಜ ದಶರಥನನ್ನು ಕುರಿತು ಅಹಿತಕರವಾದ ಮಾತುಗಳನ್ನು ಆಡಿದಳು.

**ಗದ್ಯ ॥ ಯದಿ ತ್ವಂ ಸತ್ಯಸಂಗರೋಽಸಿ ಶಂಬರಾಸುರ ಸಂಗರ**
**ಸಮುದೀರಿತ ವರಯುಗಳೇ, ಪ್ರಥಮಸ್ಯ ಫಲಂ**
**ರಾಮಸ್ಯ ವನವಾಸಂ, ದ್ವಿತೀಯಸ್ಯ ಭರತಾಭಿಷೇಚನಂ**
**ಚ ವಿಧೇಹಿ ॥**

ತ್ವಂ=ನೀನು ಯದಿ=ಒಂದು ವೇಳೆ ಸತ್ಯಸಂಗರಃ ಅಸಿ= ಆಡಿದ ಮಾತನ್ನು ನಡೆಸುವವನೇ ಆದಲ್ಲಿ ಶಂಬರಾಸುರ ಸಂಗರ=ಶಂಬರಾಸುರನೊಡನೆ ಉಂಟಾದ ಕದನದಲ್ಲಿ ಸಮುದೀರಿತ=ನೀಡಲ್ಪಟ್ಟ ವರಯುಗಳೇ=ಎರಡು ವರಗಳಲ್ಲಿ ಪ್ರಥಮಸ್ಯ=ಒಂದನೆಯದರ ಫಲಂ=ಪರಿಣಾಮವು ರಾಮಸ್ಯ=ರಾಮಚಂದ್ರನ ವನವಾಸಂ=ಕಾಡಿನ ವಾಸವನ್ನೂ ಚ=ಮತ್ತು ದ್ವಿತೀಯಸ್ಯ=ಎರಡನೆಯದರ ಫಲಂ=ಪರಿಣಾಮವು ಭರತಾಭಿಷೇಚನಂ=ಭರತನ ಪಟ್ಟಾಭಿಷೇಕವನ್ನೂ ವಿಧೇಹಿ=ಮಾಡುವವನಾಗು.

ನೀನು ಒಂದು ವೇಳೆ ಮಾತಿಗೆ ತಪ್ಪುದವನಾದರೆ ಶಂಬರಾಸುರನೊಡನೆ ಉಂಟಾದ ಸಮರ ಸಂದರ್ಭದಲ್ಲಿ ನನಗೆ ನೀಡಲ್ಪಟ್ಟ ಎರಡು ವರಗಳಲ್ಲಿ ಒಂದರ ಫಲವಾಗಿ ರಾಮಚಂದ್ರನ ವನವಾಸವನ್ನೂ ಎರಡನೆಯದರ ಫಲವಾಗಿ ಭರತನ ಪಟ್ಟಾಭಿಷೇಕವನ್ನೂ ನಡೆಸುವವನಾಗು.

ಗದ್ಯ ॥ ನೈವಂ ಯದಿ ವಿಷಮುಪಭುಜ್ಯ ಪಶ್ಯತ-
ಸ್ತವ ಪ್ರಾಣಾನ್ ತ್ಯಜಾಮಿ

ನೈವಂ ಯದಿ=ಒಂದು ವೇಳೆ ಇದನ್ನು ಮಾಡದಿದ್ದಲ್ಲಿ ಪಶ್ಯತಃ=ನೋಡುತ್ತಿರು ತವ=ನಿನ್ನ ಮುಂದೆಯೇ ವಿಷಂ=ವಿಷವನ್ನು ಉಪಭುಜ್ಯ=ಸೇವಿಸಿ ಪ್ರಾಣಾನ್=ಪ್ರಾಣವನ್ನು ತ್ಯಜಾಮಿ= ತ್ಯಜಿಸುತ್ತೇನೆ ಇತಿ=ಎಂಬುದಾಗಿ (ಅಬ್ರವೀತ್=ಹೇಳಿದಳು).

ಒಂದು ವೇಳೆ ಇದನ್ನು ಮಾಡದಿದ್ದಲ್ಲಿ ನೀನು ನೋಡುತ್ತಿರುವಂತೆಯೇ ವಿಷವನ್ನು ಸೇವಿಸಿ ಪ್ರಾಣಗಳನ್ನು ಕಳೆದುಕೊಳ್ಳುತ್ತೇನೆ ಎಂದು ಹೇಳಿದಳು.

ಇದಂ ಪರುಷಂ ಆಕರ್ಣ್ಯ ಮೂರ್ಛಿತೋಽನ್ನೃಪತಿರ್ಭುವಿ
ಪಪಾತವಜ್ರನಿರ್ಭಿನ್ನ ಪಕ್ಷಃ ಪರ್ವತರಾಡಿವ ॥೩॥

ಇದಂ=ಈ ಪರುಷಂ=ಕಠಿಣ ಮಾತನ್ನು ಆಕರ್ಣ್ಯ=ಕೇಳಿ ನೃಪತಿಃ=ರಾಜಾ ದಶರಥನು ಮೂರ್ಛಿತಃ=ಮೂರ್ಛೆಗೊಂಡು ವಜ್ರ=ಇಂದ್ರನ ವಜ್ರಾಯುಧದಿಂದ ನಿರ್ಭಿನ್ನ=ಕತ್ತರಿಸಲ್ಪಟ್ಟ ಪಕ್ಷಃ=ರೆಕ್ಕೆಗಳನ್ನುಳ್ಳ ಪರ್ವತರಾಡಿವ=ಪರ್ವತ ರಾಜನಂತೆ ಭುವಿ=ಭೂಮಿಯಲ್ಲಿ ಪಪಾತ= ಬಿದ್ದನು.

ಈ ಪರುಷ ವಚನಗಳನ್ನು ಕೇಳಿದ ರಾಜಾ ದಶರಥನು ಇಂದ್ರನ ವಜ್ರಾಯುಧದಿಂದ ರೆಕ್ಕೆಗಳು ಕತ್ತರಿಸಲ್ಪಟ್ಟು ಉರುಳಿದ ಪರ್ವತ ರಾಜನಂತೆ ಮೂರ್ಛಿತನಾಗಿ ನೆಲದಲ್ಲಿ ಬಿದ್ದನು.

ಅಸತ್ಯಭೀತೋ ನೃಪತಿಶ್ಚಿರೇಣ ಪ್ರಾಪ್ಯ ಚೇತನಾಂ
ಕೈಕೇಯೀಂ ಪ್ರಾರ್ಥಯಾಮಾಸ ರಾಮಸ್ಯ ಪುರವರ್ತನಂ ॥೪॥

ಅಸತ್ಯಭೀತಃ=ಅಸತ್ಯವಾದಿಯೆನೆಂಬ ಭಯದಿಂದ ನೃಪತಿಃ=ರಾಜನು ಚಿರೇಣ= ಬಹಳ ಹೊತ್ತು ಕಳೆದು ಚೇತನಾಂ=ಪ್ರಜ್ಞೆಯನ್ನು ಪ್ರಾಪ್ಯ=ಮರಳಿ ಹೊಂದಿ ರಾಮಸ್ಯ=ರಾಮಚಂದ್ರನ ಪುರವರ್ತನಂ=ಪಟ್ಟಣದಲ್ಲಿಯೇ ವಾಸ ಮಾಡುವಿಕೆಯನ್ನು ಕೈಕೇಯೀಂ=ಕೈಕೇಯಿಯನ್ನು ಪ್ರಾರ್ಥಯಾಮಾಸ=ಪ್ರಾರ್ಥಿಸಿದನು.

ಅಸತ್ಯವಾದಿಯೆನೆಂಬ ಭೀತಿಯಿಂದ ರಾಜನಾದ ದಶರಥನು ಬಹುಕಾಲದ ನಂತರ ಮೂರ್ಛೆ ತಿಳಿದು ಎದ್ದು ಕೈಕೇಯಿಯನ್ನು ರಾಮನು ಪಟ್ಟಣದಲ್ಲಿಯೇ ಉಳಿದುಕೊಳ್ಳುವಂತೆ ಪ್ರಾರ್ಥಿಸಿದನು.

ಬಹುಧಾ ಪ್ರಾರ್ಥ್ಯಮಾನಾಪಿ ಸಾ ಮುಮೋಚ ದುರಾಗ್ರಹಂ
ನಿಮಮಜ್ಜ ಮಹೀಜಾನಿಃ ಅಪಾರೇ ಶೋಕಸಾಗರೇ ॥೫॥

ಬಹುಧಾ=ಬಹುವಿಧವಾಗಿ ಪ್ರಾರ್ಥ್ಯಮಾನಾಪಿ=ಪ್ರಾರ್ಥನೆ ಮಾಡಿದಾಗ್ಯೂ ನ ಸಾ= ಆ ಕೈಕೇಯಿಯು ದುರಾಗ್ರಹಂ=ಹಟವನ್ನು ನಮುಮೋಚ=ತ್ಯಜಿಸಲಿಲ್ಲ. ಮಹೀಜಾನಿಃ= ಭೂಮಿಪತಿ

ವಾದ ದಶರಥನು ಅಪಾರೇ=ಬಹಳವಾದ ಶೋಕಸಾಗರೇ=ದುಃಖಸಮುದ್ರದಲ್ಲಿ ನಿಮಮಜ್ಜ= ಮುಳುಗಿಹೋದನು.

ಹಲವು ವಿಧಗಳಿಂದ ಪ್ರಾರ್ಥಿಸಿದರೂ ಸಹ ಕೈಕೇಯಿಯು ತನ್ನ ಹಟವನ್ನು ಬಿಡಲಿಲ್ಲ. ಭೂಪತಿಯಾದ ದಶರಥನು ಬಹುವಾದ ಶೋಕಸಾಗರದಲ್ಲಿ ಮುಳುಗಿಹೋದನು.

ವನಂ ಗಚ್ಛಾಮಿ ತಾತೇತಿ ಪ್ರಣಮ್ಯಾಪೃಚ್ಛ್ಯ ರಾಘವಃ
ಸಾಕಂ ಸೌಮಿತ್ರಿ ಸೀತಾಭ್ಯಾಂ ಸಮಾರುಕ್ಷದ್ರಥಂ ರಥೀ ॥೬॥

ರಥೀ=ರಥವನ್ನು ನಡೆಸಬಲ್ಲ, ಚಾತುರ್ಯವಂತನಾದ ರಾಘವಃ=ರಘುರಾಮನು ತಾತ= ಎಲೈ ತಂದೆಯೇ ಅಹಂ=ನಾನು ವನಂ ಗಚ್ಛಾಮಿ=ಕಾಡಿಗೆ ಹೋಗುತ್ತೇನೆ ಇತಿ=ಎಂಬುದಾಗಿ ಪ್ರಣಮ್ಯ=ನಮಸ್ಕರಿಸಿ ಆಪೃಚ್ಛ್ಯ=ಅಪ್ಪಣೆಯನ್ನು ಕೇಳಿ ಸೌಮಿತ್ರಿ ಸೀತಾಭ್ಯಾಂ=ಸುಮಿತ್ರಾ ನಂದನನಾದ ಲಕ್ಷ್ಮಣ ಮತ್ತು ಸೀತೆಯರಿಂದ ಸಾಕಂ=ಒಡಗೂಡಿ ರಥಂ=ರಥವನ್ನು ಸಮಾರುಕ್ಷತ್=ಹತ್ತಿದನು.

ರಥವನ್ನು ಓಡಿಸುವುದರಲ್ಲಿ ಪರಿಶ್ರಮವುಳ್ಳವನಾದ ರಘುರಾಮನು "ಎಲೈ ತಂದೆಯೇ, ನಾನು ಕಾಡಿಗೆ ಹೋಗುತ್ತೇನೆ" ಎಂಬುದಾಗಿ ತಂದೆಗೆ ನಮಸ್ಕರಿಸಿ ಸುಮಿತ್ರಾನಂದನನಾದ ಲಕ್ಷ್ಮಣ ಮತ್ತು ಸೀತೆಯರ ಒಡಗೂಡಿ ರಥಾರೋಹಣ ಮಾಡಿದನು.

ಸರ್ವಾನನುಗತಾನ್ ಪೌರಾನ್ ವಂಚಯಿತ್ವಾ ವಿನಿದ್ರಿತಾನ್
ಶಾದ್ವಲೇನ ಪಥಾರಾತ್ರ್ಯಾಂ ಸಜಗಾಮ ಸುರಾಪಗಾಂ ॥೭॥

ಸಃ=ಅವನು ಅನುಗತಾನ್ ಸರ್ವಾನ್=ಅನುಸರಿಸಿ ಬಂದ ಎಲ್ಲ ವಿನಿದ್ರಿತಾನ್ ಪೌರಾನ್=ನಿದ್ರಿಸುತ್ತಿರುವ ಪುರಜನರನ್ನೂ ವಂಚಯಿತ್ವಾ=ವಂಚಿಸಿ ರಾತ್ರ್ಯಾಂ=ರಾತ್ರಿಯ ವೇಳೆಯಲ್ಲಿ ಶಾದ್ವಲೇನ ಪಥಾ=ಭತ್ತದ ಫಸಲಿನಿಂದ ತುಂಬಿದ ಹಾದಿಯಲ್ಲಿ (ನಡೆದು) ಸುರಾಪಗಾಂ=ಸುರನದಿಯಾದ ಗಂಗಾತೀರವನ್ನು ಅಜಗಾಮ=ಸೇರಿದನು.

ಅವನು ತನ್ನನ್ನನುಸರಿಸಿ ಬಂದ, ನಿದ್ರೆ ಮಾಡುತ್ತಿದ್ದ ಎಲ್ಲ ಪುರಜನರನ್ನೂ ವಂಚಿಸಿ ರಾತ್ರಿಯಲ್ಲಿ ಭತ್ತದ ಬೆಳೆಯಿಂದ ತುಂಬಿದ ಹಾದಿಯಲ್ಲಿ ನಡೆದು ಸುರನದಿಯಾದ ಗಂಗೆಯ ತೀರವನ್ನು ಸೇರಿದನು.

ಗದ್ಯ ॥ ತತ್ರನಿವಸತಾ ಗುಹಾಭಿಧಾನೇನ ವ್ಯಾಧೇನ ಸುಹೃದಾ
ಸಮುತ್ತೀರ್ಯ ಸುರತರಂಗಿಣೀಮವಾಪ್ಯ ಚಿತ್ರಕೂಟ-
ಗಿರಿಮನುಜ ವಿರಚಿತ ಪರಿವಸ್ಥಃ ಸಹಸೀತಯಾ
ಚಿರಮರಮತ ರಘುವರಃ ॥

ತತ್ರ=ಅಲ್ಲಿ ನಿವಸತಾ=ವಾಸವಾಗಿದ್ದ ಸುಹೃದಾ=ಮಿತ್ರನಾದ ಗುಹಾಭಿಧಾನೇನ= ಗುಹನೆಂಬ ಹೆಸರುಳ್ಳ ವ್ಯಾಧೇನ=ಬೇಡನಿಂದ ಸುರತರಂಗಿಣೀಂ=ಸುರನದಿ ಗಂಗೆಯನ್ನು ಸಮುತ್ತೀರ್ಯ=ದಾಟಿ ಚಿತ್ರಕೂಟಗಿರಿಂ=ಚಿತ್ರಕೂಟ ಪರ್ವತವನ್ನು ಅವಾಪ್ಯ=ಸೇರಿ ಅನುಜ ವಿರಚಿತ=ಸಹೋದರನಿಂದ ರಚಿಸಲ್ಪಟ್ಟ ಪರಿವಸ್ಥಃ=ಪರ್ಣಶಾಲೆಯನ್ನು ಉಳ್ಳವನಾಗಿ

(ಆಶ್ರಮವನ್ನು ಹೊಂದಿ) ಸೀತಯಾಸಹ=ಸೀತೆಯ ಜೊತೆಯಲ್ಲಿ ರಘುವರಃ=ರಘುಶ್ರೇಷ್ಠ ರಾಮಚಂದ್ರನು ಚಿರಂ=ಬಹುಕಾಲ ಅರಮತ=ವಿಹರಿಸುತ್ತಿದ್ದನು.

ಅಲ್ಲಿ ವಾಸವಾಗಿದ್ದ ಮಿತ್ರ ಗುಹನೆಂಬ ಬೇಡನ ಸಹಾಯದಿಂದ ಸುರನದಿ ಗಂಗೆಯನ್ನು ದಾಟಿ ಚಿತ್ರಕೂಟ ಪರ್ವತ ಪ್ರಾಂತ್ಯವನ್ನು ಸೇರಿದವನಾಗಿ ಸೋದರನಿಂದ ಅಲ್ಲಿ ವಿರಚಿಸಲ್ಪಟ್ಟ ಪರ್ಣಶಾಲೆಯನ್ನು ಹೊಂದಿದವನಾಗಿ ಸೀತೆಯ ಜೊತೆ ರಾಮಚಂದ್ರನು ಬಹುಕಾಲ ಸಂತೋಷದಿಂದ ವಿಹರಿಸುತ್ತಿದ್ದನು.

ಮಹತಾ ಪುತ್ರಶೋಕೇನ ದಿವಂ ದಶರಥೋಯಯೌ
ದೂತೈರ್ಭರತ ಮಾನಿನ್ಯುಃ ಅಮಾತ್ಯಾ ಆಶುಗಾಮಿಭಿಃ ॥೮॥

ದಶರಥಃ=ದಶರಥ ಮಹಾರಾಜನು ಮಹತಾ=ತೀವ್ರವಾದ ಪುತ್ರಶೋಕೇನ=ಪುತ್ರವಿರಹದಿಂದ ಉಂಟಾದ ದುಃಖದಿಂದ ದಿವಂ=ಸ್ವರ್ಗವನ್ನು ಯಯೌ=ಸೇರಿದನು. ಅಮಾತ್ಯಾಃ=ಸಚಿವರು ಆಶುಗಾಮಿಭಿಃ=ಶೀಘ್ರಗಾಮಿಗಳಾದ ದೂತೈಃ=ದೂತರಿಂದ ಭರತಂ=ಭರತನನ್ನು ಆನಿನ್ಯುಃ=ಕರೆತರಿಸಿದರು.

ಅತಿಯಾದ ಪುತ್ರ ಶೋಕದಿಂದ ದಶರಥ ಮಹಾರಾಜನು ಸ್ವರ್ಗಸ್ಥನಾದನು. ಸಚಿವರು ಶೀಘ್ರಗಾಮಿಗಳಾದ ದೂತರ ಮೂಲಕ ಭರತನನ್ನು ಕರೆತರಿಸಿದರು.

ಗದ್ಯ ॥ ಸಚ ಸಮಾಕರ್ಣ್ಯ, ಸಕಲಾಂಪ್ರವೃತ್ತಿಂ ನಿಪತ್ಯ, ಸಂಜ್ಞಾವಿರಹಿತಃ,
ಸರ್ವಂ ಸಹಾಯಮವಾಪ್ಯಚಿರಾಯ ಚೇತನಾಂ, ವಿರಮ್ಯ ವಸಿಷ್ಠಾದಿ
ನಿರೋಧೇನ ಕೈಕೇಯಿ ಮಂಥರಾ ಮಾರಣಾದ್ವಿಧಾಯ ಔರ್ಧ್ವ
ದೈಹಿಕಂ ದಶರಥಾಯ ಪ್ರಸ್ಥಾಯ ನಿಖಿಲಪೌರ್ಯಸಮುಪೇತ್ಯ
ಚಿತ್ರಕೂಟಾಚಲಮವನಿಜಾಜಾನೇಶ್ಚರಣಾರುಣಾಂಬುಜಯುಗಳೇ ನಿಪಪಾತ ॥

ಸಃ ಚ= ಆ ಭರತನಾದರೋ ಸಕಲಾಂ=ಎಲ್ಲಾ ಪ್ರವೃತ್ತಿಂ=ವಿಚಾರಗಳನ್ನೂ ಸಮಾಕರ್ಣ್ಯ=ಕೇಳಿದವನಾಗಿ ಸಂಜ್ಞಾವಿರಹಿತಃ=ಪ್ರಜ್ಞಾಶೂನ್ಯನಾಗಿ ಸರ್ವಂಸಹಾಯಾಂ=ಎಲ್ಲವನ್ನೂ ಸಹಿಸಿಕೊಳ್ಳಬಲ್ಲವಳಾದಂತಹ ಭೂಮಿಯಲ್ಲಿ ನಿಪತ್ಯ=ಬಿದ್ದು ಚಿರಾಯ=ಬಹುಕಾಲದ ಮೇಲೆ ಚೇತನಾಂ ಅವಾಪ್ಯ=ಪ್ರಜ್ಞೆಯನ್ನು ಮತ್ತೆ ಪಡೆದು ವಸಿಷ್ಠಾದಿ ನಿರೋಧೇನ=ವಸಿಷ್ಠ ಮುಂತಾದವರ ತಡೆಹಿಡಿಯುವಿಕೆಯಿಂದ ಕೈಕೇಯಿ ಮಂಥರಾ ಮಾರಣಾತ್=ಕೈಕೇಯಿ ಮತ್ತು ಮಂಥರೆಯರನ್ನು ಕೊಂದುಹಾಕುವ ಪ್ರವೃತ್ತಿಯಿಂದ ವಿರಮ್ಯ=ಬಿಡುಗಡೆ ಹೊಂದಲ್ಪಟ್ಟು ದಶರಥಾಯ=ದಶರಥ ಮಹಾರಾಜನಿಗೆ ಔರ್ಧ್ವ ದೈಹಿಕಂ=ಅಪರಕ್ರಿಯೆಗಳನ್ನು ವಿಧಾಯ=ಮಾಡಿ ನಿಖಿಲಪೌರ್ಯಸಮಂ=ಎಲ್ಲಾ ಪುರಜನರ ಸಮೇತ ಪ್ರಸ್ಥಾಯ=ಹೊರಟು ಚಿತ್ರಕೂಟಾಚಲಂ=ಚಿತ್ರಕೂಟ ಪರ್ವತವನ್ನು ಉಪೇತ್ಯ=ಸೇರಿ ಅವನಿಜಾಜಾನೇಃ=ಭೂಸುತಾಕಾಂತನಾದ ರಾಮಚಂದ್ರನ ಚರಣಾರುಣಾಂಬುಜ ಯುಗಳೇ=ಕೆಂದಾವರೆಗಳಂತಹ ಪಾದಗಳಲ್ಲಿ ನಿಪಪಾತ=ಬಿದ್ದನು.

ಆ ಭರತನಾದರೋ ಎಲ್ಲಾ ವಿಚಾರಗಳನ್ನೂ ಅರಿತವನಾಗಿ ಪ್ರಜ್ಞಾಶೂನ್ಯನಾಗಿ ಸರ್ವಂಸಹೆ

ಬಿಸಿಲ್ಬರುವ ಭೂಮಿಯಲ್ಲಿ ಬಿದ್ದು ಬಹುಕಾಲದ ಮೇಲೆ ಪ್ರಜ್ಞೆಯನ್ನು ಮತ್ತೆ ಹೊಂದಿ ವಸಿಷ್ಠ ಮುಂತಾದವರ ಹೇಳಿಕೆಯಿಂದ ಮಂಥರೆ ಮತ್ತು ಕೈಕೇಯಿ ಇವರನ್ನು ಕೊಂದು ಹಾಕುವ ಪ್ರವೃತ್ತಿಯನ್ನು ತ್ಯಜಿಸಿ ದಶರಥನ ಔರ್ಧ್ವ ದೈಹಿಕ ಕ್ರಿಯೆಗಳನ್ನು ನೆರವೇರಿಸಿ ಸಕಲ ಪುರಜನರ ಸಮೇತ ಹೊರಟು ಚಿತ್ರಕೂಟ ಪರ್ವತವನ್ನು ಸೇರಿ ಭೂಸುತಾಪತಿಯಾದ ರಾಮಚಂದ್ರನ ಕೆಂಪು ತಾವರೆಯಂತೆ ಕಂಗೊಳಿಸುತ್ತಿದ್ದ ಪಾದಗಳ ಮೇಲೆ ಬಿದ್ದನು.

ಮೃತಮಾಕರ್ಣ್ಯ ಪಿತರಂ ಶುಚಾದತ್ವಾಜಲಾಂಜಲಿಂ
ಪಪ್ರಚ್ಛ ಭರತಂ ಭದ್ರಂ ಪೌರಾಣಾಂ ಪರಮಃಪುಮಾನ್ ॥೩೯॥

ಪರಮಃ ಪುಮಾನ್-ಪರಮ ಪುರುಷನಾದ ರಾಮಚಂದ್ರನು ಪಿತರಂ-ತಂದೆಯನ್ನು ಮೃತಂ-ಮೃತಿಹೊಂದಿದವನನ್ನಾಗಿ ಆಕರ್ಣ್ಯ-ಕೇಳಿ ದುಃಖದಿಂದ ಜಲಾಂಜಲಿಂ-ತರ್ಪಣವನ್ನು ದತ್ವಾ-ನೀಡಿ ಭರತಂ-ಭರತನನ್ನು ಪೌರಾಣಾಂ-ಪುರಜನರ ಭದ್ರಂ-ಕುಶಲವನ್ನು ಪಪ್ರಚ್ಛ-ಕೇಳಿದನು.

ಪುರುಷೋತ್ತಮನಾದ ಶ್ರೀರಾಮಚಂದ್ರನು ತಂದೆಯು ಮೃತಪಟ್ಟಿದ್ದನ್ನು ಕೇಳಿ ತಿಳಿದು ಶೋಕದಿಂದ ತರ್ಪಣವನ್ನು ನೀಡಿ (ನಂತರ) ಭರತನನ್ನು ಪುರಜನರ ಕುಶಲವನ್ನು ಕುರಿತು ಪ್ರಶ್ನಿಸಿದನು.

ತತಸ್ಸಪಾದಪತನಂ ಭರತೇನಾರ್ಥಿತೋಪಿ ಸಃ
ನಜಗಾಮ ಪುರಂ ರಾಮಸ್ತಾತಾದೇಶಮನುಸ್ಮರನ್ ॥೪೦॥

ತತಃ-ನಂತರ ಸಃ ರಾಮಃ-ಆ ರಾಮನಾದರೋ ಭರತೇನ-ಭರತನಿಂದ ಸಪಾದಪತನಂ-ಪಾದವಂದನೆಗಳಿಂದಸಹಿತನಾಗಿ ಅರ್ಥಿತೋಪಿ-ಬೇಡಿಕೊಳ್ಳಲ್ಪಟ್ಟನೂ ಸಹ ತಾತಾದೇಶಂ-ತಂದೆಯ ಅಪ್ಪಣೆಯನ್ನು ಅನುಸ್ಮರನ್-ಜ್ಞಾಪಕದಲ್ಲಿಟ್ಟುಕೊಂಡು ಪುರಂಪ್ರತಿ-ಪಟ್ಟಣವನ್ನು ಕುರಿತು ನಜಗಾಮ-ತೆರಳಲಿಲ್ಲ.

ಅನಂತರ ಭರತನಿಂದ ನಮಸ್ಕರಿಸಲ್ಪಟ್ಟು ಎಷ್ಟೋ ಬೇಡಿಕೊಂಡರೂ ಸಹ ತಂದೆಯ ಅಪ್ಪಣೆಯನ್ನು ಜ್ಞಾಪಿಸಿಕೊಂಡು ರಾಮಚಂದ್ರನು ಊರಿಗೆ ಹಿಂತಿರುಗಲಿಲ್ಲ.

ಗದ್ಯ ॥ ಅನಂತರ ಮಗ್ರಜಾದೇಶೇನ ಅಯೋಧ್ಯಾಮುಪೇತ್ಯ ಭರತೋ
ನಂದಿಗ್ರಾಮೇ ರಘುನಂದನವತ್, ಜಟಾವಲ್ಕಲ ಧಾರೀಸನ್, ಸಿಂಹಾಸನ
ಪ್ರತಿಷ್ಠಾಪಿತಾಭ್ಯಾಂ ರಾಮಪಾದುಕಾಭ್ಯಾಂ, ರಾಜಕಾರ್ಯಾಣಿ ವಿಜ್ಞಾಪಯನ್
ರಾಮಾಗಮನ ದಿವಸಾನ್ ಗಣಯನ್ನುವಾಸ ॥

ಅನಂತರಂ-ಅನಂತರ ಅಗ್ರಜಾದೇಶೇನ-ಅಣ್ಣನ ಅಪ್ಪಣೆಯಂತೆ ಅಯೋಧ್ಯಾ ಮುಪೇತ್ಯ-ಅಯೋಧ್ಯೆಯನ್ನು ಸೇರಿ ನಂದಿಗ್ರಾಮೇ-ನಂದಿಗ್ರಾಮದಲ್ಲಿ ರಘುನಂದನವತ್-ರಾಮನಂತೆಯೇ ಜಟಾವಲ್ಕಲಧಾರೀಸನ್-ಜಟೆ ಮತ್ತು ನಾರುಮಡಿಗಳನ್ನು ಧರಿಸಿ ಸಿಂಹಾಸನಪ್ರತಿಷ್ಠಾಪಿತಾಭ್ಯಾಂ- ಸಿಂಹಾಸನದಲ್ಲಿ ಪ್ರತಿಷ್ಠೆ ಮಾಡಲ್ಪಟ್ಟ ರಾಮ ಪಾದುಕಾಭ್ಯಾಂ-ಶ್ರೀರಾಮಚಂದ್ರನ ಪಾದುಕೆಗಳಿಗೆ ರಾಜಕಾರ್ಯಾಣಿ-ರಾಜಕಾರ್ಯಗಳನ್ನು

ವಿಜ್ಞಾಪಯನ್-ವಿಜ್ಞಾಪನೆ ಮಾಡುತ್ತಾ ರಾಮಾಗಮನ ದಿವಸಾನ್-ರಾಮನ ಆಗಮನದ ದಿವಸಗಳನ್ನೇ ಗಣಯನ್ ಉವಾಸ-ಎಣಿಸುತ್ತಾ ವಾಸಿಸುತ್ತಿದ್ದನು.

ಅನಂತರದಲ್ಲಿ ಅಣ್ಣನ ಆದೇಶದಂತೆ ಅಯೋಧ್ಯೆಯನ್ನು ಸೇರಿ ನಂದಿಗ್ರಾಮವೆನ್ನುವ ಹಳ್ಳಿಯಲ್ಲಿ ರಾಮನಂತೆಯೇ ಜಟಾವಲ್ಕಲಧಾರಿಯಾಗಿದ್ದುಕೊಂಡು ಸಿಂಹಾಸನದ ಮೇಲೆ ರಾಮಪಾದುಕೆಗಳನ್ನು ಪ್ರತಿಷ್ಠಾಪಿಸಿ ಅವುಗಳಿಗೆ ರಾಜಕಾರ್ಯಗಳನ್ನು ವಿಜ್ಞಾಪಿಸುತ್ತಾ ರಾಮನ ಆಗಮನದ ದಿವಸಗಳನ್ನೇ ಎಣಿಸುತ್ತಾ ವಾಸ ಮಾಡುತ್ತಾ ಇದ್ದನು.

ರಘುವಂಶಪಯೋರಾಶಿ ಶೀತಾಂಶುರಥರಾಘವಃ
ಆಶ್ರಮಾದಾಶ್ರಮಂ ಗಚ್ಛನ್ ಪ್ರಾವಿಶದ್ದಂಡಕಾವನಂ ॥೧೧॥

ಅಥ-ಅನಂತರ ರಘುವಂಶ ಪಯೋರಾಶಿ-ರಘುಕುಲವೆನ್ನುವ ಸಮುದ್ರಕ್ಕೆ ಶೀತಾಂಶು- ಶೀತಕಿರಣನಾದ ಚಂದ್ರನಂತೆ ಇರುವ ರಾಘವಃ-ರಾಮಚಂದ್ರನು ಆಶ್ರಮಾತ್-ಆಶ್ರಮದಿಂದ ಆಶ್ರಮಂ-ಆಶ್ರಮಕ್ಕೆ ಗಚ್ಛನ್-ಹೋಗುತ್ತಾ ದಂಡಕಾವನಂ-ದಂಡಕಾರಣ್ಯವನ್ನು ಪ್ರಾವಿಶತ್- ಪ್ರವೇಶಿಸಿದನು.

ಅನಂತರ ರಘುಕುಲವೆನ್ನುವ ಜಲನಿಧಿಗೆ ಹಿಮಾಂಶುವಿನಂತಿರುವ ರಾಮಚಂದ್ರನು ಆಶ್ರಮದಿಂದ ಆಶ್ರಮಕ್ಕೆ ಸಾಗುತ್ತ ದಂಡಕಾರಣ್ಯ ಪ್ರದೇಶವನ್ನು ಪ್ರವೇಶಿಸಿದನು.

*ಇತಿ ಅಯೋಧ್ಯಾ ಕಾಂಡಃ ಸಮಾಪ್ತಃ*

*ಅಯೋಧ್ಯಾ ಕಾಂಡವು ಸಮಾಪ್ತಿಯಾಯಿತು.*

# ಅಥ ಅರಣ್ಯ ಕಾಂಡಃ

# ಅರಣ್ಯ ಕಾಂಡ

ವಿರಾಧಮಸುರಂ ಶ್ವಭ್ರೇ ನಿಖನನ್ ದಂಡಕಾಂವಿಶನ್
ಶರಭಂಗ ಮುನಿಂ ರಾಮೋನತ್ವಾಗಸ್ತ್ಯ ಮುಪಾಗಮತ್ ॥೧॥

ದಂಡಕಾಂ=ದಂಡಕಾವನವನ್ನು ವಿಶನ್=ಪ್ರವೇಶಿಸುತ್ತಾ ರಾಮಃ=ರಾಮಚಂದ್ರನು ವಿರಾಧಂ=ವಿರಾಧನೆಂಬ ಹೆಸರುಳ್ಳ ಅಸುರಂ=ರಾಕ್ಷಸನನ್ನು ಶ್ವಭ್ರೇ=ದೊಡ್ಡ ಹಳ್ಳದಲ್ಲಿ ನಿಖನನ್=ತಳ್ಳಿ ಮುಚ್ಚಿದನು. ಶರಭಂಗ ಮುನಿಂ=ಶರಭಂಗನೆಂಬ ಋಷಿಯನ್ನು ನತ್ವಾ=ನಮಸ್ಕರಿಸಿ ಅಗಸ್ತ್ಯಂ=ಅಗಸ್ತ್ಯ ಋಷಿಗಳನ್ನು ಉಪಾಗಮತ್=ಸಮೀಪಿಸಿದನು.

ದಂಡಕಾರಣ್ಯವನ್ನೂ ಪ್ರವೇಶಿಸಿದ ಶ್ರೀರಾಮಚಂದ್ರನು ವಿರಾಧನೆಂಬ ಹೆಸರಿನ ರಾಕ್ಷಸನನ್ನು ದೊಡ್ಡಹಳ್ಳದಲ್ಲಿ ತಳ್ಳಿ ಮುಚ್ಚಿದನು. ನಂತರ ಶರಭಂಗನೆಂಬ ಮುನಿಯನ್ನು ನಮಸ್ಕರಿಸಿ ಅಗಸ್ತ್ಯ ಋಷಿಗಳ ಸಮೀಪವನ್ನು ಸೇರಿದನು.

ತದ್ದತ್ತಾನೀಂದ್ರ ಚಾಪಾದೀನ್ಯಾದಾಯ ಸಹ ಸೀತಯಾ
ಪಂಚವಟ್ಯಾಂ ಚಿರಂ ರಾಮೋರೇಮೇ ಅನುಜ ಕೃತೋಟಜೇ ॥೨॥

ತದ್ದತ್ತಾನಿ=ಅವರಿಂದ ಕೊಡಲ್ಪಟ್ಟ ಇಂದ್ರಚಾಪಾದೀನ್=ಇಂದ್ರನ ಧನುಸ್ಸು ಮುಂತಾದುವನ್ನು ಆದಾಯ=ತೆಗೆದುಕೊಂಡು ರಾಮಃ=ರಾಮಚಂದ್ರನು ಪಂಚವಟ್ಯಾಂ=ಪಂಚವಟಿ ಎನ್ನುವ ಸ್ಥಳದಲ್ಲಿ ಅನುಜ ಕೃತೋಟಜೇ=ತಮ್ಮನಿಂದ ರಚಿಸಲ್ಪಟ್ಟ ಪರ್ಣಶಾಲೆಯಲ್ಲಿ ಸೀತಯಾ ಸಹ=ಸೀತೆಯ ಜೊತೆಯಲ್ಲಿ ಚಿರಂ=ಬಹುಕಾಲ ರೇಮೇ=ವಿಹರಿಸಿದನು.

ಅವರಿಂದ ಅನುಗ್ರಹಿಸಲ್ಪಟ್ಟ ಇಂದ್ರ ಧನುಸ್ಸು ಮುಂತಾದುವನ್ನು ತೆಗೆದುಕೊಂಡು ಶ್ರೀರಾಮಚಂದ್ರನು ಪಂಚವಟಿ ಎನ್ನುವ ಸ್ಥಳದಲ್ಲಿ ಸಹೋದರನಿಂದ ರಚಿಸಲ್ಪಟ್ಟ ಪರ್ಣಶಾಲೆಯಲ್ಲಿ ಸೀತೆಯ ಜೊತೆ ಬಹುಕಾಲ ವಿಹರಿಸಿದನು.

ಗದ್ಯ ॥ ತತ್ರಕದಾಚನ ಹೇಮಂತ ಸಮಯೇ ರಾವಣಾನುಜಾ
ಶೂರ್ಪಣಖಾಭಿಧಾನ ಯಾತುಧಾನೀ ಸೌಂದರ್ಯಸಲಿಲ
ಶರಧಿಂ ದಾಶರಥಿಂ ನಿರೀಕ್ಷ್ಯ ಭರ್ತಾಮಮಭವಾನ್
ಭವತ್ವಿತಿ ನಿರ್ಬಂಧ ॥

ತತ್ರ=ಅಲ್ಲಿ ಹೇಮಂತಸಮಯೇ=ಹೇಮಂತ ಋತುವಿನ ಸಂದರ್ಭದಲ್ಲಿ ಕದಾಚನ=ಒಮ್ಮೆ ರಾವಣಾನುಜಾ=ರಾವಣನ ತಂಗಿಯಾದ ಶೂರ್ಪನಖಾಭಿಧಾನಾ=ಶೂರ್ಪನಖಿ ಎಂಬುವ ಹೆಸರುಳ್ಳ ಯಾತುಧಾನೀ=ರಾಕ್ಷಸಿಯು ಸೌಂದರ್ಯಸಲಿಲಶರಧಿಂ=ಸೌಂದರ್ಯ ಎನ್ನುವ ನೀರಿಗೆ ಸಮುದ್ರದೋಪಾದಿಯಾದ ದಾಶರಥಿಂ=ದಶರಥಕುಮಾರ ರಾಮಚಂದ್ರನನ್ನು ನಿರೀಕ್ಷ್ಯ=ನೋಡಿ ಮಮ=ನನಗೆ ಭವಾನ್=ನೀನು ಭರ್ತಾ=ಪತಿಯು ಭವತು=ಆಗು ಇತಿ=ಎಂಬುದಾಗಿ ನಿರ್ಬಂಧ=ಬಲವಂತ ಮಾಡಿದಳು.

ಅಲ್ಲಿ ಹೇಮಂತ ಋತುವಿನ ಸಮಯದಲ್ಲೊಮ್ಮೆ ರಾವಣನ ತಂಗಿಯಾದ ಶೂರ್ಪನಖಿ ಎಂಬ ಹೆಸರಿನ ರಾಕ್ಷಸಿಯೊರ್ವಳು ಸೌಂದರ್ಯವೆನ್ನುವ ನೀರಿಗೆ ಸಮುದ್ರದೋಪಾದಿಯಾಗಿ ಇರುವಂತಹ ದಶರಥಕುಮಾರ ರಾಮಚಂದ್ರನನ್ನು ನೋಡಿ "ನನಗೆ ನೀನು ಪತಿಯಾಗು" ಎಂದು ನಿರ್ಬಂಧ ಮಾಡಿದಳು.

ಪರಿಗ್ರಹೀತು ಮಾತ್ಮಾನಂ ದಾಶರಥ್ಯೋರನಿಚ್ಛತೋಃ
ಸೀತಾಮಾಹರ್ತುಮಿಚ್ಛಂತೀಸಾಭ್ಯಧಾವನ್ನಿಶಾಚರೀ ॥೩॥

ದಾಶರಥ್ಯೋಃ=ದಶರಥನ ಕುಮಾರರಾದ ರಾಮಲಕ್ಷ್ಮಣರು ಆತ್ಮಾನಂ=ತನ್ನನ್ನು ಪರಿಗ್ರಹೀತುಂ=ಮದುವೆ ಮಾಡಿಕೊಳ್ಳಲು ಅನಿಚ್ಛತೋಃ ಸತ್ಯೋಃ=ನಿರಾಕರಿಸುತ್ತಿರಲು ಸಾ=ಆ ನಿಶಾಚರೀ=ರಾಕ್ಷಸಿಯು ಸೀತಾಂ=ಸೀತೆಯನ್ನು ಆಹರ್ತುಂ=ತಿಂದುಹಾಕಲು ಇಚ್ಛಂತೀ=ಇಷ್ಟಪಟ್ಟವಳಾಗಿ ಅಭ್ಯಧಾವನ್=ಓಡಿಬಂದಳು.

ದಶರಥ ಕುಮಾರರಾದ ರಾಮಲಕ್ಷ್ಮಣರು ತನ್ನನ್ನು ಮದುವೆ ಮಾಡಿಕೊಳ್ಳಲು ನಿರಾಕರಿಸುತ್ತಿರಲು ಆ ರಾಕ್ಷಸಿಯು ಸೀತೆಯನ್ನು ತಿಂದುಹಾಕಲು ಇಚ್ಛಿಸುತ್ತಾ ಓಡಿಬಂದಳು.

ಪ್ರಜಾವತೀಂ ಜಿಘಾಂಸಂತ್ಯಾಸ್ತಸ್ಯಾ ಸೌಮಿತ್ರಿರಾತ್ಮವಾನ್
ಛಿತ್ವಾಕೃಷ್ಯಚ್ಛುರಿಕಯಾ ಕರ್ಣನಾಸಮತಿದ್ರವತ್ ॥೪॥

ಆತ್ಮವಾನ್=ತಮ್ಮನಾದ ಸೌಮಿತ್ರಿಃ=ಸುಮಿತ್ರಾನಂದನನಾದ ಲಕ್ಷ್ಮಣನು ಪ್ರಜಾವತೀಂ=ಅತ್ತಿಗೆಯನ್ನು ಜಿಘಾಂಸಂತ್ಯಾಃ=ಕೊಲ್ಲಲು ಸನ್ನದ್ಧಳಾದ ತಸ್ಯಾಃ=ಆಕೆಯ ಕರ್ಣನಾಸಂ=ಕಿವಿ ಮತ್ತು ಮೂಗುಗಳನ್ನು ಆಕೃಷ್ಯ=ಸೆಳೆದು ಛುರಿಕಯಾ=ಕತ್ತಿಯಿಂದ ಛಿತ್ವಾ=ಕತ್ತರಿಸಿ ಅತಿದ್ರವತ್=ಓಡಿಸಿದನು.

ತಮ್ಮನಾದ ಸೌಮಿತ್ರಿಯು ಅತ್ತಿಗೆಯನ್ನು ಕೊಲ್ಲಲು ಸಿದ್ಧಳಾದ ಆಕೆಯ ಕಿವಿ ಮತ್ತು ಮೂಗುಗಳನ್ನು ಸೆಳೆದು ಕತ್ತಿಯಿಂದ ಕತ್ತರಿಸಿ ಓಡಿಸಿದನು.

ಗದ್ಯ ॥ ತದನು ಪರಿದೇವನರವೇಣ ಕುಲಗಿರಿ ಗಹ್ವರ ನಿದ್ರಾಣ
ಕೇಸರಿಣಃ ಸಮುದ್ವೇಜಯಂತೀ ಪಲಾಯ್ಯ ಜನಸ್ಥಾನಂ
ಪ್ರತಿ ತತ್ರನಿವಸಂತಿ ಚತುರ್ದಶ ಸಹಸ್ರಾಣಿಯಾತುಧಾನಾನಿ
ತದಧಿಪತೀಂಶ್ಚ ಖರದೂಷಣ ತ್ರಿಶಿರೋಮುಖ ದಶಕಂಧರ
ಬಂಧೂನ್ ರಘುಧುರಂಧರ ನಿರಾಕರಣಾಯ ನಿರ್ವ್ಯಾಪಯತಿಸ್ಮ ॥

ತದನು=ನಂತರ ಪರಿದೇವನರವೇಣ=ಚೀತ್ಕಾರ ಸ್ವರದಿಂದ ಕುಲಗಿರಿ=ಕುಲಪರ್ವತಗಳ ಗಹ್ವರ=ಗುಹೆಗಳಲ್ಲಿ ನಿದ್ರಾಣ=ನಿದ್ರಿಸುತ್ತಿದ್ದ ಕೇಸರಿಣಃ=ಸಿಂಹಗಳನ್ನು ಸಮುದ್ವೇಜಯಂತೀ=ಬೆಚ್ಚಿ ಬೀಳುವಂತೆ ಮಾಡುತ್ತಾ, ಜನಸ್ಥಾನಂ ಪ್ರತಿ=ಜನಸ್ಥಾನವನ್ನು ಕುರಿತು ಪಲಾಯ್ಯ=ಓಡಿ ತತ್ರನಿವಸಂತಿ=ಅಲ್ಲಿ ವಾಸಿಸುತ್ತಿದ್ದ ಚತುರ್ದಶ ಸಹಸ್ರಾಣಿ=ಹದಿನಾಲ್ಕು ಸಾವಿರ ಯಾತುಧಾನಾನಿ =ರಾಕ್ಷಸರನ್ನು ಚ=ಮತ್ತು ತದಧಿಪತೀನ್=ಅವರ ಯಜಮಾನರಾದ ಖರದೂಷಣ ತ್ರಿಶಿರಃ ಮುಖ=ಖರ, ದೂಷಣ, ತ್ರಿಶಿರಸ್ ಮುಂತಾದ ದಶಕಂಧರ ಬಂಧೂನ್=ದಶಶಿರನಾದ ರಾವಣನ

ಬಂಧೂಗಳನ್ನು, ರಘುಧುರಂಧರ ನಿರಾಕರಣಾಯ=ರಘುವಂಶ ದುರಂಧರನಾದ ರಾಮನನ್ನು ಕೊಲ್ಲಲು ನಿರ್ಭಾಪಯತಿಸ್ಮ=ಕಳುಹಿಸಿಕೊಟ್ಟಳು.

ನಂತರ ಚೀತ್ಕಾರ ಸ್ವರದಿಂದ ಕುಲಗಿರಿಗಳ ಗುಹೆಗಳಲ್ಲಿ ನಿದ್ರಿಸುತ್ತಿದ್ದ ಸಿಂಹಗಳು ಬೆಚ್ಚಿ ಬೀಳುವಂತೆ ಮಾಡುತ್ತಾ, ಜನಸ್ಥಾನವನ್ನು ಕುರಿತು ಓಡಿ ಅಲ್ಲಿ ವಾಸಿಸುತ್ತಿದ್ದ ಹದಿನಾಲ್ಕು ಸಾವಿರ ರಾಕ್ಷಸರನ್ನು ಮತ್ತು ಅವರ ಯಜಮಾನರಾದ ಖರ, ದೂಷಣ ಮತ್ತು ತ್ರಿಶಿರಸ್ ಮುಂತಾದ ರಾವಣನ ಬಂಧುಗಳನ್ನು ರಘುವಂಶ ಧುರಂಧರನಾದ ರಾಮಚಂದ್ರನನ್ನು ಕೊಲ್ಲಲು ಕಳುಹಿಸಿಕೊಟ್ಟಳು.

ಆಯಾಂತಮಸುರಾನೀಕಂ ಆಲೋಕ್ಯ ಅವನಿಜಾಪತಿಃ
ಆದಿಶ್ಯ ಲಕ್ಷ್ಮಣಂ ಸೀತಾ ರಕ್ಷಣೇ ಸಧನುರ್ಯಯೌ ॥೫॥

ಅವನಿಜಾಪತಿಃ=ಭೂಮಿಸುತೆಯ ಭರ್ತೃವಾದ ಶ್ರೀರಾಮಚಂದ್ರನು ಆಯಾಂತಂ=ಬರುತ್ತಿರುವ ಅಸುರಾನೀಕಂ=ರಾಕ್ಷಸರ ಸೈನ್ಯವನ್ನು ಆಲೋಕ್ಯ=ನೋಡಿ ಸೀತಾರಕ್ಷಣೇ=ಸೀತೆಯ ರಕ್ಷಣೆಗೆಂದು ಲಕ್ಷ್ಮಣಂ=ಲಕ್ಷ್ಮಣನನ್ನು ಆದಿಶ್ಯ=ನಿಯಮಿಸಿ ಸಧನುಃ= ಧನುಸ್ಸಿನಿಂದ ಕೂಡಿ ಯಯೌ=ಹೊರಟನು.

ಭೂಸುತಾಪತಿ ಶ್ರೀರಾಮನು ಬರುತ್ತಿರುವ ರಾಕ್ಷಸರ ಸೈನ್ಯವನ್ನು ನೋಡಿ ಸೀತೆಯ ರಕ್ಷಣೆಗಾಗಿ ಲಕ್ಷ್ಮಣನನ್ನು ನೇಮಿಸಿ ಧನುರ್ಧಾರಿಯಾಗಿ ಹೊರಟನು.

ರಾಮಸ್ತತೋರಾಕ್ಷಸ ವೀರವಾಹಿನೀಂ
ವಿನಾಶಯಾಮಾಸಶರೌಘವೃಷ್ಟಿಭಿಃ
ಜೇತಾರಮಾಯಾಂತ ಮವೇಕ್ಷ್ಯಜಾನಕೀಂ
ಸಮಾಶ್ಲಿಷತ್ಸತ್ವರಮಾತ್ಮವಲ್ಲಭಂ ॥೬॥

ತತಃ=ಅನಂತರ ರಾಮಃ=ರಾಮನು ಶರೌಘವೃಷ್ಟಿಭಿಃ=ಬಾಣಗಳ ಸಮೂಹದ ವರ್ಷದಿಂದ ರಾಕ್ಷಸವೀರವಾಹಿನೀಂ=ರಾಕ್ಷಸವೀರರ ಸೈನ್ಯವನ್ನು ವಿನಾಶಯಾಮಾಸ=ನಾಶ ಮಾಡಿದನು. ಜಾನಕೀ=ಜನಕರಾಜನ ಮಗಳಾದ ಸೀತೆಯು ಜೇತಾರಂ=ಜಯಿಸಿದ ಆಯಾಂತಂ=ಬರುತ್ತಿರುವ ಆತ್ಮವಲ್ಲಭಂ=ತನ್ನ ಪತಿ ರಾಮನನ್ನು ಅವೇಕ್ಷ್ಯ=ನೋಡಿ ಸತ್ವರಂ=ಶೀಘ್ರವಾಗಿ ಸಮಾಶ್ಲಿಷತ್=ಆಲಂಗಿಸಿಕೊಂಡಳು.

ಅನಂತರ ರಾಮನು ಬಾಣಗಳ ಸಮೂಹದ ವರ್ಷದಿಂದ ರಾಕ್ಷಸ ವೀರರ ಸೈನ್ಯವನ್ನು ನಾಶ ಮಾಡಿದನು. ಜನಕಸುತೆಯಾದ ಸೀತೆಯು ಜಯಗಳಿಸಿ ಬರುತ್ತಿರುವ ತನ್ನ ಪತಿ ರಾಮಚಂದ್ರನನ್ನು ನೋಡಿ ತತ್‌ಕ್ಷಣವೇ ಆಲಂಗಿಸಿಕೊಂಡಳು.

ಗದ್ಯ ॥ ತದನುಜನಸ್ಥಾನೇ ವಿಜನಸ್ಥಾನೇ ಸತಿಲಂಕಾಂಪ್ರತಿ
ಪ್ರಧಾವ್ಯ ಸಹಸಾ ನಿಪತ್ಯ ಚಿರಂ ವಿಲಪ್ಯ ನಿವೇದಿತೋ
ದಂಡಕಾಂ-ವಿಕೃತಮುಖೀಂ ಶೂರ್ಪಣಖಾಂ ದಶಮುಖೋ
ವಿಲೋಕ್ಯ ಪಾದಪೀಠಾಚ್ಯುತ್ವಾ ದಂಡಕಾನ್ ಸುವರ್ಣ ಹರಿಣ
ವೇಷ್ಮ್ರಗಧಾರೀ ಮಾರೀಚ ಸಹಾಯ ಪರಿವ್ರಾಜಕ ಭೂಮಿಕಾಂ
ಬ್ಯಾದಿಕೋ ರಘುಕಾಂತಾಲಾ [illegible] ॥

ತದನು=ನಂತರ ಜನಸ್ಥಾನೇ=ಜನಸ್ಥಾನವು ವಿಜನಸ್ಥಾನೇ ಸತಿ=ನಿರ್ಜನ ಸ್ಥಾನವಾಗಲು ಲಂಕಾಂಪ್ರತಿ=ಲಂಕೆಯನ್ನು ಕುರಿತು ಪ್ರಧಾವ್ಯ=ಓಡಿ ಸದಸಿ=ಸಭೆಯಲ್ಲಿ ವಿಪತ್ಯ=ಬಿದ್ದು ಚಿರಂ=ದೀರ್ಘವಾಗಿ ವಿಲಪ್ಯ=ಅಳುತ್ತಾ ನಿವೇದಿತ=ಹೇಳಿದ ಉದಂತ=ವೃತ್ತಾಂತಗಳನ್ನು ಉಳ್ಳವಳಾದ ವಿಕೃತ ಮುಖೀಂ=ವಿಕಾರವಾದ ಮುಖವುಳ್ಳ ಶೂರ್ಪಣಖಾಂ=ಶೂರ್ಪಣಖಿಯನ್ನು ವಿಲೋಕ್ಯ=ನೋಡಿ ದಶಮುಖಃ=ರಾವಣನು ದಂತಾನ್=ಹಲ್ಲುಗಳನ್ನು ಕಟಕಟಾಕೃತ್ಯ=ಕಟಕಟನೆ ಕಡಿದು ಸುವರ್ಣ ಹರಿಣ=ಚಿನ್ನದ ಜಿಂಕೆಯ ವರ್ಷ್ಮಧಾರೀ=ಶರೀರವನ್ನು ಧರಿಸಿದ ಮಾರೀಚ ಸಹಾಯ=ಮಾರೀಚನ ಸಹಾಯವುಳ್ಳವನಾಗಿ ಪರಿವ್ರಾಜಕ ಭೂಮಿಕಾಚ್ಛಾದಿತಃ=ಸಂನ್ಯಾಸಿಯ ವೇಷದಿಂದ ಮುಚ್ಚಲ್ಪಟ್ಟವನಾಗಿ ರಘು ಶಾರ್ದೂಲ ಪರ್ಣಶಾಲಾಭ್ಯರ್ಣಂ=ರಘುವಂಶಕ್ಕೆ ಸಿಂಹದೋಪಾದಿಯಾದ ರಾಮಚಂದ್ರನ ಪರ್ಣಶಾಲೆಯ ಸಮೀಪಕ್ಕೆ ಆಜಗಾಮ=ಬಂದು ಸೇರಿದನು.

ನಂತರ ಜನಸ್ಥಾನವು ನಿರ್ಜನವಾಗಲು ಲಂಕೆಯನ್ನು ಕುರಿತು ಓಡಿದವಳಾಗಿ ಅಲ್ಲಿನ ಸಭೆಯಲ್ಲಿ ಬಿದ್ದು ದೀರ್ಘವಾಗಿ ಅಳುತ್ತಾ ವೃತ್ತಾಂತವನ್ನು ಹೇಳಿದ ವಿಕಾರ ಮುಖದ ಶೂರ್ಪಣಖಿಯನ್ನು ನೋಡಿದ ದಶಮುಖನು ಹಲ್ಲುಗಳನ್ನು ಕಟಕಟನೆ ಕಡಿದು ಚಿನ್ನದ ಜಿಂಕೆಯ ವೇಷವನ್ನು ಧರಿಸಿದ ಮಾರೀಚನ ಸಹಾಯವುಳ್ಳವನಾಗಿ ಸಂನ್ಯಾಸಿಯ ವೇಷದಿಂದ ಆಚ್ಛಾದಿತನಾಗಿ ರಘುಕುಲಕ್ಕೆ ಶಾರ್ದೂಲ ಸದೃಶನಾದ ರಾಮಚಂದ್ರನ ಪರ್ಣಶಾಲೆಯ ಸಮೀಪವನ್ನು ಬಂದು ಸೇರಿದನು.

ಘಾಸಾನ್ ಘಸಂತಂ ಹರಿಣಂ ಸೌವರ್ಣಂ ಪ್ರೇಕ್ಷ್ಯಮೈಥಿಲೀ
ಆನೀಯ ದೇಹಿನಾಥೇತಿ ಪ್ರೈಷಯತ್ಪ್ರಾಣವಲ್ಲಭಂ ॥೬॥

ಘಾಸಾನ್=ಹುಲ್ಲನ್ನು ಘಸಂತಂ=ಮೇಯುತ್ತಿದ್ದ ಸೌವರ್ಣಂ=ಸುವರ್ಣದ ಹರಿಣಂ=ಜಿಂಕೆಯನ್ನು ಮೈಥಿಲೀ=ಸೀತೆಯು ಪ್ರೇಕ್ಷ್ಯ=ನೋಡಿ (ಹೇ) ನಾಥ=ಎಲೈ ನಾಥನೆ ತಂ=ಅದನ್ನು ಆನೀಯ=ತಂದು ಕೊಡು ಇತಿ=ಹೀಗೆ ಆತ್ಮವಲ್ಲಭಂ=ತನ್ನ ಪತಿಯನ್ನು ಪ್ರೈಷಯತ್=ಕಳುಹಿಸಿದಳು.

ಹುಲ್ಲನ್ನು ತಿನ್ನುತ್ತಿದ್ದ ಚಿನ್ನದ ಜಿಂಕೆಯನ್ನು ಕಂಡ ಸೀತೆಯು "ಎಲೈ ನಾಥನೇ! ಅದನ್ನು ತಂದುಕೊಡು" ಎಂಬುದಾಗಿ ಹೇಳಿ ತನ್ನ ಪತಿಯನ್ನು ಕಳುಹಿಸಿದಳು.

ದೂರಂಗತಸ್ಸ ಮಸುರಂ ಕ್ರಿಯಯಾವಿಧಾವ್ಯ
ವಿವ್ಯಾಧ ಶಾತಧಿತಿನೇನ ರಘುಪ್ರವೀರಃ
ಚುಕ್ರೋಶ ದಾಶರಥಿವತ್ ಸಮೃಗೋಪಿತೋಽಸೌ
ಹಾಲಕ್ಷ್ಮಣಾ! ಅನುಜ ಸುರೇ ಸುಮೈಥಿಲೀತಿ ॥೭॥

ರಘುಪ್ರವೀರಃ=ವೀರನಾದ ರಾಮನು ದೂರಂಗತಃ=ಬಹಳ ದೂರ ಸಾಗಿ ಕ್ರಿಯಯಾ=(ಅದರ) ಚರ್ಯೆಗಳಿಂದ ತಂ=ಆ ಜಿಂಕೆಯನ್ನು ಅಸುರಂ=ರಾಕ್ಷಸನೆಂದು ವಿಧಾವ್ಯ=ತಿಳಿದು ಶಾತಧಿತಿನಾ=ಚೂಪಾದ ಅಲುಗಿನ ಬಾಣದಿಂದ ವಿವ್ಯಾಧ=ಕೊಂದು ಹಾಕಿದನು. ಸಃ=ಆ ಮೃಗಃ=ಜಿಂಕೆಯು ದಾಶರಥಿವತ್=ರಾಮನಂತೆಯೇ ಹಾ ಸುರೇ=ಎಲೈ ಸುಖವಾದ ಲಕ್ಷ್ಮಣಾ=ಲಕ್ಷ್ಮಣನೇ ಅನುಜ=ತಮ್ಮನೇ ಹಾ ಸುಮೈಥಿಲೀ=ಎಲೈ ಜಾನಕಿ

ಯಾದ ಮೈಥಿಲಿಯೇ ಹತೋಽಸ್ಮಿ-ನಾನು ಸತ್ತೆನು ಇತಿ-ಎಂಬುದಾಗಿ ಚುಕ್ರೋಶ-ಕೂಗಿಕೊಂಡಿತು.

ವೀರನಾದ ರಘುರಾಮನು ಬಹಳ ದೂರ ಸಾಗಿ ಅದರ ಚರ್ಯೆಗಳಿಂದ ಅದೊಂದು ರಾಕ್ಷಸನೆಂಬುದಾಗಿ ಅರಿತು ಹರಿತವಾದ ಬಾಣದಿಂದ ಅದನ್ನು ಸಂಹರಿಸಿದನು. ಆ ಜಿಂಕೆಯಾದರೋ ದಾಶರಥಿಯಂತೆಯೇ "ಎಲೈ ಸುಖನಾದ ಲಕ್ಷ್ಮಣನೇ! ಸಹೋದರನೇ! ಎಲೈ ಸಖಿಯೇ! ಮೈಥಿಲೀ! ನಾನು ಸತ್ತೆನು" ಎಂಬುದಾಗಿ ಕೂಗಿಕೊಂಡಿತು.

ಗದ್ಯ ॥ ತೇನಾರ್ತನಾದೇನ ವಿಪನ್ನ (ಭುವನ) ಪರಿತ್ರಾತಾರಮಪಿ
ತಮಾಪನ್ನಂ ವಿಜ್ಞಾಯ ದೇವರಂ ಪ್ರೇಷಿತವತೀಂ ದಶರಥ
ಸ್ನುಷಾಂ, ದಶವದನೋ ಬಾಹುಭಿಃ ನಿಜರಥಮಾರೋಪ್ಯ
ತತ್ಪಕ್ಷಪಾತೇನ ಯೋದ್ಧುಮಭಿಯಾತಸ್ಯ ಜಟಾಯುಷಃ
ಪಕ್ಷಪಾತಂ ವಿಧಾಯ, ಲಂಕಾಂ ಪ್ರವಿಶ್ಯ, ಅಶೋಕವನಿಕಾಯಾಂ,
ಏನಾಂ ಅತಿ ಭಯಂಕರ ರಾಕ್ಷಸೀ ಪರಿವೃತಾಂ
ಸ್ಥಾಪಯಾ ಮಾಸ (ಸ್ಥಾಪಯಾಂ ಬಭೂವ)

ತೇನ-ಅದರ ಆರ್ತನಾದೇನ-ದೀನವಾದ ಧ್ವನಿಯಿಂದ (ಭುವನ-ಜಗತ್ತನ್ನು ಪರಿತ್ರಾತಾರಂ-ಕಾಪಾಡುವವನಾದರೂ) ವಿಪನ್ನ-ಕಷ್ಟದಲ್ಲಿ ಇರುವವರನ್ನು ಪರಿತ್ರಾತಾರಂ-ಕಾಪಾಡುವವನಾದರೂ ತಂ ಅಪಿ-ಆ ರಾಮನನ್ನೂ ಸಹ ಆಪನ್ನಂ-ಆಪತ್ತಿನಲ್ಲಿದ್ದಾನೆಂದು ವಿಜ್ಞಾಯ-ತಿಳಿದು ದೇವರಂ-ಮೈದುನನನ್ನು ಪ್ರೇಷಿತವತೀಂ-ಕಳುಹಿಸಿಕೊಟ್ಟ ದಶರಥ ಸ್ನುಷಾಂ-ದಶರಥನ ಸೊಸೆಯಾದ ಸೀತೆಯನ್ನು ದಶವದನಃ-ದಶಕಂಠ ರಾವಣನು ಬಾಹುಭಿಃ-ತೋಳುಗಳಿಂದ ನಿಜರಥಂ-ತನ್ನ ರಥವನ್ನು ಆರೋಪ್ಯ-ಹತ್ತಿಸಿ ತತ್ಪಕ್ಷಪಾತೇನ-ಅವಳಿಗೋಸ್ಕರವಾಗಿ ಯೋದ್ಧುಂ-ಯುದ್ಧ ಮಾಡಲು ಅಭಿಯಾತಸ್ಯ-ಬಂದ ಜಟಾಯುಷಃ-ಜಟಾಯುವಿನ ಪಕ್ಷಪಾತಂ ವಿಧಾಯ-ರೆಕ್ಕೆಗಳನ್ನು ಕತ್ತರಿಸಿ ಲಂಕಾಂ-ಲಂಕಾಪಟ್ಟಣವನ್ನು ಪ್ರವಿಶ್ಯ-ಪ್ರವೇಶ ಮಾಡಿ ಅಶೋಕವನಿಕಾಯಾಂ-ಅಶೋಕ ವನದಲ್ಲಿ ಅತಿಭಯಂಕರ ರಾಕ್ಷಸೀಪರಿವೃತಾಂ-ಅತಿಭೀಕರವಾದ ರಾಕ್ಷಸ ಸ್ತ್ರೀಯರ ಬಳಸಿನಲ್ಲಿ ಏನಾಂ-ಈ ಸೀತೆಯನ್ನು ಸ್ಥಾಪಯಾಮಾಸ (ಸ್ಥಾಪಯಾಂ ಬಭೂವ) ಇರಿಸಿದನು.

ಅದರ ದೀನ ಸ್ವರವನ್ನು ಕೇಳಿ ಜಗತ್ತನ್ನು ಅಥವಾ ಕಷ್ಟದಲ್ಲಿರುವವರನ್ನು ಕಾಪಾಡುವವನು ಆ ರಾಮನಾಗಿದ್ದರೂ ಸಹ ಆಪತ್ತಿನಲ್ಲಿರುವನೆಂಬುದಾಗಿ ತಿಳಿದು ಮೈದುನನನ್ನು ಕಳುಹಿಸಿಕೊಟ್ಟ ದಶರಥನ ಸೊಸೆ ಸೀತೆಯನ್ನು ದಶಕಂಧರನಾದ ರಾವಣನು ತೋಳುಗಳಿಂದ ತನ್ನ ರಥವನ್ನು ಏರಿಸಿದನು. ಅವಳಿಗೋಸ್ಕರ ಯುದ್ಧ ಮಾಡಲು ಸನ್ನದ್ಧನಾಗಿ ಬಂದ ಜಟಾಯುವಿನ ರೆಕ್ಕೆಗಳನ್ನು ಕತ್ತರಿಸಿ ಲಂಕಾಪಟ್ಟಣವನ್ನು ಸೇರಿ ಅಲ್ಲಿನ ಅಶೋಕವನದಲ್ಲಿ ಅತಿಭಯಂಕರಿಯರಾದ ರಾಕ್ಷಸ ಸ್ತ್ರೀಯರ ನಡುವೆ ಈ ಸೀತೆಯನ್ನು ಸ್ಥಾಪಿಸಿದನು.

ಅಧ್ವನ್ಯಾಯಾಂತಮಮುಮಾಲೋಕ್ಯೋದ್ವಿಗ್ನಮಾನಸಃ
[illegible] ॥

ತತಃ-ಅನಂತರ ಅಧ್ವನಿ-ದಾರಿಯಲ್ಲಿ ಆಯಾಂತಂ-ಬರುತ್ತಿರುವ ಅಮುಂ-

ತಮ್ಮನನ್ನು ಆಲೋಕ್ಯ=ನೋಡಿ ಉದ್ವಿಗ್ನಮಾನಸಃ=ಚಿಂತಾಕ್ರಾಂತವಾದ ಮನಸ್ಸುಳ್ಳ ರಾಘವಃ =ರಾಮನು ಉಟಜೇ=ಆಶ್ರಮದಲ್ಲಿ ಸೀತಾಂ=ಸೀತೆಯನ್ನು ಅಪಶ್ಯನ್=ಕಾಣದವನಾಗಿ ವ್ಯಲಪತ್=ಪ್ರಲಾಪಿಸಿದನು.

ನಂತರ ದಾರಿಯಲ್ಲಿ ಬರುತ್ತಿರುವಂತಹ ಸೋದರನನ್ನು ಕಂಡು ಚಿಂತಾಕುಲಿತ ಮಾನಸನಾದ ರಾಘವನು ಆಶ್ರಮದಲ್ಲಿ ಸೀತೆಯನ್ನು ಕಾಣದೆ ಪ್ರಲಾಪಿಸಿದನು.

ಸೀತಾಪತಿರ್ಧರಣಿಜಾಮಥ ಮಾರ್ಗಮಾಣಃ
ಶೀರ್ಣಪ್ರತೀಕ ಮುದಿತಾಶರರಾಜಕೃತ್ಯಂ
ಸಂಸ್ಕೃತ್ಯಗೃಧ್ರ ನೃಪತಿಂ ವಿಕೃತಂ ಕಬಂಧಂ
ಕೃತ್ವಾ ವಿದೋಷಮಮಲಾಂಬುಮವಾಪ ಪಂಪಾಂ ॥೧೦॥

ಅಥ=ಅನಂತರ ಸೀತಾಪತಿಃ=ರಾಮಚಂದ್ರನು ಧರಣಿಜಾಂ=ಸೀತೆಯನ್ನು ಮಾರ್ಗಮಾಣಃ =ಹುಡುಕುವವನಾಗಿ ಶೀರ್ಣಪ್ರತೀಕಂ=ಛಿದ್ರವಾದ ಅವಯವದಿಂದ ಕೂಡಿದ ಉದಿತ ಆಶರರಾಜಕೃತ್ಯಂ=ಹೇಳಲ್ಪಟ್ಟ ರಾಕ್ಷಸರಾಜ ರಾವಣನ ಕೃತ್ಯವುಳ್ಳ ಗೃಧ್ರನೃಪತಿಂ=ಹದ್ದಿನ ರಾಜನಾದ ಜಟಾಯುವನ್ನು ಸಂಸ್ಕೃತ್ಯ=ಸಂಸ್ಕಾರಯುಕ್ತನನ್ನಾಗಿ ಮಾಡಿ ವಿಕೃತಂ=ವಿಕಾರ ರೂಪದವನಾದ ಕಬಂಧಂ=ಕಬಂಧನೆಂಬುವ ರಾಕ್ಷಸನನ್ನು ವಿದೋಷಂ=ದೋಷದೂರನನ್ನಾಗಿ (ಶಾಪಮುಕ್ತನನ್ನಾಗಿ) ಕೃತ್ವಾ=ಮಾಡಿ ಅಮಲಾಂಬು=ಶುದ್ಧವಾದ ನೀರುಳ್ಳ ಪಂಪಾಂ=ಪಂಪಾ ಸರೋವರವನ್ನು ಅವಾಪ=ಹೊಂದಿದನು.

ಅನಂತರ ರಾಮಚಂದ್ರನು ಸೀತೆಯನ್ನು ಹುಡುಕುತ್ತಾ ಛಿದ್ರವಾದ ಅವಯವದಿಂದ ಕೂಡಿದ ರಾಕ್ಷಸ ರಾಜ ರಾವಣನ ಕೃತ್ಯವನ್ನು ತಿಳಿಸಿದ ಹದ್ದಿನ ರಾಜ ಜಟಾಯುವನ್ನು ಸಂಸ್ಕಾರ ಮಾಡಿ ವಿಕಾರ ರೂಪದ ಕಬಂಧನೆಂಬ ರಾಕ್ಷಸನನ್ನು ಶಾಪ ವಿಮುಕ್ತನನ್ನಾಗಿ ಮಾಡಿ ಪರಿಶುದ್ಧವಾದ ನೀರಿನಿಂದ ಕೂಡಿದ ಪಂಪಾ ಸರೋವರವನ್ನು ಸೇರಿದನು.

ಇತಿ ಅರಣ್ಯಕಾಂಡಃ

ಅರಣ್ಯ ಕಾಂಡವು ಮುಗಿಯಿತು.

# ಅಥ ಕಿಷ್ಕಿಂಧಾ ಕಾಂಡಃ

## ಕಿಷ್ಕಿಂಧಾ ಕಾಂಡ

ತತಃ ಕಪಿರ್ವಾಲಿಭಯಾನ್ನಿಲೀನಃ
ಸುಗ್ರೀವ ನಾಮಾ ಚಿರಮೃಶ್ಯಮೂಕೇ
ಕೋದಂಡತೂಣೀರ ಧರೌ ಕುಮಾರೌ
ದೃಷ್ಟ್ವಾ ಬಿಭಾಯಾಗ್ರಜಭೃತ್ಯಮತ್ಯಾ ॥೧॥

ತತಃ=ಅನಂತರ ವಾಲಿಭಯಾತ್=ವಾಲಿಯಿಂದ ಉಂಟಾದ ಭಯದಿಂದ ಚಿರಂ= ಬಹು ಕಾಲದಿಂದ ಋಷ್ಯಮೂಕೇ=ಋಷ್ಯಮೂಕ ಎನ್ನುವ ಪರ್ವತದಲ್ಲಿ ನಿಲೀನಃ=ಅವಿತುಕೊಂಡ ಸುಗ್ರೀವನಾಮಾ=ಸುಗ್ರೀವನೆಂಬ ಹೆಸರುಳ್ಳ ಕಪಿಃ=ಕಪಿಯು ಕೋದಂಡತೂಣೀರಧರೌ=ಬಿಲ್ಲು ಮತ್ತು ಬತ್ತಳಿಕೆಗಳನ್ನು ಧರಿಸಿದ ಕುಮಾರೌ=ಯುವಕರಿಬ್ಬರನ್ನೂ ದೃಷ್ಟ್ವಾ=ನೋಡಿ ಅಗ್ರಜಭೃತ್ಯಮತ್ಯಾ=ಅಣ್ಣನ ಆಳುಗಳೆಂದು ಭಾವಿಸಿ ಬಿಭಾಯ=ಭಯಪಟ್ಟನು.

ಅನಂತರದಲ್ಲಿ ವಾಲಿಯ ಹೆದರಿಕೆಯಿಂದ ಬಹುಕಾಲದಿಂದ ಋಷ್ಯಮೂಕ ಪರ್ವತದಲ್ಲಿ ಅವಿತುಕೊಂಡಿದ್ದ ಸುಗ್ರೀವನೆಂಬುವ ವಾನರನು ಬಿಲ್ಲು ಬತ್ತಳಿಕೆಗಳನ್ನು ಧರಿಸಿ ಬರುತ್ತಿರುವ ಯುವಕರಿಬ್ಬರನ್ನೂ ಕಂಡು ತನ್ನ ಅಣ್ಣನಾದ ವಾಲಿಯ ಭೃತ್ಯರೆಂಬುದಾಗಿ ಭಾವಿಸಿ ಭಯಪಟ್ಟನು.

ಚಿಕೀರ್ಷುರೇತಸ್ಯ ಹಿತಂ ಹನೂಮಾನ್
ಧೃತ್ವಾ ಪರಿವ್ರಾಜಕ ಭೂಮಿಕಾಂ ದ್ರಾಕ್
ಗತ್ವಾ ಸಮಾನೀಯ ನರೇಂದ್ರ ಪುತ್ರೌ
ಮೈತ್ರೀಮಕಾರೀತ್ ಪ್ಲವಗಾಧಿಪಸ್ಯ ॥೨॥

ಏತಸ್ಯ=ಈತನ (ಸುಗ್ರೀವನ) ಹಿತಂ=ಒಳ್ಳೆಯದನ್ನು ಚಿಕೀರ್ಷುಃ=ಮಾಡಲಿಚ್ಛೆಯುಳ್ಳವನಾಗಿ ಹನೂಮಾನ್=ಹನುಮಂತನು ದ್ರಾಕ್=ಒಡನೆಯ್ಯೇ ಪರಿವ್ರಾಜಕಭೂಮಿಕಾಂ=ಸಂನ್ಯಾಸಿಯ ವೇಷವನ್ನು ಧೃತ್ವಾ=ಧರಿಸಿಕೊಂಡು ಗತ್ವಾ=ಹೋಗಿ ನರೇಂದ್ರಪುತ್ರೌ=ರಾಜಕುಮಾರರಿಬ್ಬರನ್ನೂ ಸಮಾನೀಯ=ಕರೆದುತಂದು ಪ್ಲವಗಾಧಿಪಸ್ಯ=ಕಪಿಗಳಿಗೆ ರಾಜನಾಗಿದ್ದ ಸುಗ್ರೀವನ ಮೈತ್ರೀಂ=ಸ್ನೇಹವನ್ನು ಅಕಾರೀತ್=ಮಾಡಿಸಿ ಕೊಟ್ಟನು.

ಸುಗ್ರೀವನ ಹಿತವನ್ನು ಅಪೇಕ್ಷಿಸಿದ ಹನುಮಂತನು ಒಡನೆಯೇ ಸಂನ್ಯಾಸಿಯ ವೇಷವನ್ನು ಧಾರಣ ಮಾಡಿಕೊಂಡು ಹೋಗಿ ರಾಜಪುತ್ರರಿಬ್ಬರನ್ನೂ ಕರೆತಂದು ವಾನರರಾಜ ಸುಗ್ರೀವನ ಸ್ನೇಹವನ್ನು ಮಾಡಿಸಿದನು.

ಗದ್ಯ ॥ ತತಃ ಪರಂ ಅನ್ಯೋನ್ಯ ವಿನಿವೇದಿತ ಭೂತಪೂರ್ವ
[illegible] [illegible] ಪರಸ್ಪರಂ ಪ್ರತಿಜ್ಞಾಯ
[illegible] [illegible] ಬಭೂವತುಃ ॥

ತತಃಪರಂ=ಅನಂತರದಲ್ಲಿ ಅನ್ಯೋನ್ಯ=ಪರಸ್ಪರವಾಗಿ ವಿನಿವೇದಿತಭೂತಪೂರ್ವ ನಿಜಕಥೌ=ವಿವರಿಸಲ್ಪಟ್ಟ ತಮ್ಮ ಹಿಂದೆ ನಡೆದ ವೃತ್ತಾಂತಗಳಿಂದ ಕೂಡಿದ ಕಪಿನರವರೌ=ವಾನರ ಮತ್ತು ನರಶ್ರೇಷ್ಠರುಗಳಾದ ಸುಗ್ರೀವ ಮತ್ತು ರಾಮಚಂದ್ರರು ಇಬ್ಬರೂ ಪರಸ್ಪರಂ=ಒಬ್ಬರಿಗೊಬ್ಬರು ವೈರಿವಧಾಯ=ಶತ್ರುಗಳನ್ನು ಸಂಹಾರ ಮಾಡಲು ವಿರಚಿತ ಸಂಗರೌ=ಮಾಡಲ್ಪಟ್ಟ ಪ್ರತಿಜ್ಞೆಯುಳ್ಳವರು ಬಭೂವತುಃ=ಆದರು.

ಅನಂತರದಲ್ಲಿ ಅವರುಗಳು ಪರಸ್ಪರವಾಗಿ ತಮ್ಮ ತಮ್ಮ ಹಿಂದಿನ ವೃತ್ತಾಂತಗಳನ್ನು ಹೇಳಿಕೊಂಡು ವಾನರ ಮತ್ತು ನರಶ್ರೇಷ್ಠರುಗಳಾದ ಸುಗ್ರೀವ ಮತ್ತು ರಾಮಚಂದ್ರರಿಬ್ಬರೂ ಶತ್ರುಗಳ ಸಂಹಾರ ಮಾಡಲು ಒಬ್ಬರಿಗೊಬ್ಬರು (ನೆರವಾಗಲು) ಪ್ರತಿಜ್ಞೆ ಮಾಡಿದರು.

ಸುಗ್ರೀವ ವಿಸ್ರಂಭ ಕೃತೇಃ ದುಂದುಭೇಃ
ಶರೀರ ಮುತ್ಕ್ಷಿಪ್ಯ ಪದಾಂಗುಲೀನಖಾತ್
ಸಪ್ತಾಪಿ ಸಾಲಾನ್ಗಿರಿ ನಾಗಲೋಕೌ
ಬಿಭೇದ ಬಾಣೇನ ಬಿಡೌಜಸಾ ಸಮಃ ॥೩॥

ಬಿಡೌಜಸಾಸಮಃ=ಇಂದ್ರನಿಗೆ ಸಮಾನನಾದ ಸಃ=ಆ ರಾಮನು ಸುಗ್ರೀವ ವಿಸ್ರಂಭಕೃತೇ=ಸುಗ್ರೀವನಿಗೆ ಭರವಸೆಯನ್ನುಂಟುಮಾಡಲು ದುಂದುಭೇಃ=ದುಂದುಭಿ ಎನ್ನುವ ರಾಕ್ಷಸನ ಶರೀರಂ=ಶರೀರವನ್ನು ಪದಾಂಗುಲೀನಖಾತ್=ಕಾಲಿನ ಕಿರುಬೆರಳಿನ ಉಗುರಿನಿಂದ ಉತ್ಕ್ಷಿಪ್ಯ=ಚಿಮ್ಮಿ ಎಸೆದು ಬಾಣೇನ=ಬಾಣದಿಂದ ಸಪ್ತಾಪಿಸಾಲಾನ್=ಏಳು ಸಾಲವೃಕ್ಷಗಳನ್ನೂ ಗಿರಿನಾಗಲೋಕೌ=ಬೆಟ್ಟ ಮತ್ತು ನಾಗಲೋಕಗಳನ್ನೂ ಬಿಭೇದ=ಭೇದಿಸಿದನು.

ಇಂದ್ರನಿಗೆ ಸಮಾನ ಶಕ್ತಿವಂತನಾದ ರಾಮಚಂದ್ರನು ಸುಗ್ರೀವನಿಗೆ ಭರವಸೆಯನ್ನು ಉಂಟುಮಾಡುವ ಸಲುವಾಗಿ ದುಂದುಭಿ ಎನ್ನುವ ರಾಕ್ಷಸನ (ಮೃತ) ಶರೀರವನ್ನು ಕಾಲಿನ ಕಿರು ಬೆರಳಿನ ಉಗುರಿನಿಂದ ಚಿಮ್ಮಿ ಎಸೆದು ಬಾಣದಿಂದ ಏಳು ಸಾಲವೃಕ್ಷಗಳನ್ನೂ ಬೆಟ್ಟ ಮತ್ತು ಪಾತಾಳಗಳನ್ನೂ ಭೇದಿಸಿದನು.

ತತಃ ಪ್ರತೀತಃ ಕಪಿಪಾರ್ಥಿವೋಽಸೌ
ಋಭುಕ್ಷಿ ಪುತ್ರೇಣ ಸಮಂ ವ್ಯಯುದ್ಧ್ಯತ್
ಭ್ರಾತ್ರೋಃ ಸ್ತಯೋರ್ವೇಧಮನಾಪ್ನುವಾನೋ
ಬಭೂವ ತೂಷ್ಣೀಂ ಭರತಾಗ್ರಜನ್ಮಾ ॥೪॥

ತತಃ=ಅನಂತರ ಪ್ರತೀತಃ=ಸಂತಸಗೊಂಡ ಅಸೌ=ಈ ಕಪಿಪಾರ್ಥಿವಃ=ಕಪಿವೀರ ಸುಗ್ರೀವನು ಋಭುಕ್ಷಿಪುತ್ರೇಣ=ಇಂದ್ರ ಪುತ್ರನಾದ ವಾಲಿಯಿಂದ ಸಹ=ಕೂಡಿಕೊಂಡು ವ್ಯಯುದ್ಧ್ಯತ್=ಯುದ್ಧ ಮಾಡಿದನು. ಭರತಾಗ್ರಜನ್ಮಾ=ಭರತನಿಗಿಂತ ಮೊದಲು ಜನಿಸಿದ ಶ್ರೀರಾಮನು ತಯೋಃ=ಆ ಇಬ್ಬರು ಭ್ರಾತ್ರೋಃ=ಸೋದರರಲ್ಲಿ ವೇಧಂ=ವ್ಯತ್ಯಾಸವನ್ನು ಅನಾಪ್ನುವಾನಃ=ತಿಳಿದುಕೊಳ್ಳಲಾಗದೇ ತೂಷ್ಣೀಂ=ಸುಮ್ಮನೆ ಬಭೂವ=ಇದ್ದನು.

ಅನಂತರ ಸಂತಸಗೊಂಡ ಕಪಿವೀರ ಸುಗ್ರೀವನು ಇಂದ್ರನ ಮಗನಾದ ವಾಲಿಯೊಡನೆ ಯುದ್ಧ ಮಾಡಿದನು. ಭರತಾಗ್ರಜನಾದ ರಾಮನು ಈ ಇಬ್ಬರು ಸೋದರರಲ್ಲಿ [illegible]

ತಿಳಿದುಕೊಳ್ಳಲಾಗದೇ ಸುಮ್ಮನೆ ಇದ್ದನು.

ಗದ್ಯ ॥ ಅಥಸರಘುಕುಲತಿಲಕೋ ವಾಲಿಬಲಾ ಸಹಿಷ್ಣುತಯಾ
ಕಾಂದಿಶೀಕಂ ಅಪರತ್ರ ತ್ರಪಾವಶಾದ್ ಅವನತಗ್ರೀವಂ ಸುಗ್ರೀವಂ
ಸುಮಮಾಲಾಲಂಕೃತಗ್ರೀವಂ ವಿಧಾಯ ವಧಾಯ ವಿಧತ್ಸ್ವ
ಆಯೋಧನಮಿತಿ ಪುನರ್ನ್ಯಯುಂಜತ್ ॥

ಅಥ-ಅನಂತರ ಸಃ-ಆ ರಘುಕುಲತಿಲಕಃ-ಶ್ರೀರಾಮಚಂದ್ರನು ವಾಲಿಬಲಾ ಸಹಿಷ್ಣುತಯಾ-ವಾಲಿಯ ಶಕ್ತಿಯನ್ನು ತಡೆದುಕೊಳ್ಳಲಾರದೆ ಕಾಂದಿಶೀಕಂ-ಭಯದಿಂದ ಓಡಿದ ಅಪರತ್ರ-ಮತ್ತೂ ತ್ರಪಾವಶಾತ್-ನಾಚಿಗೆಯಿಂದ ಅವನತಗ್ರೀವಂ-ತಗ್ಗಿಸಿದ ತಲೆಯುಳ್ಳ ಸುಗ್ರೀವಂ-ಸುಗ್ರೀವನನ್ನು ಸುಮಮಾಲಾಲಂಕೃತಗ್ರೀವಂ-ಪುಷ್ಪಹಾರದಿಂದ ಅಲಂಕಾರ ಮಾಡಿದ ಕತ್ತುಳ್ಳವನನ್ನಾಗಿ ವಿಧಾಯ-ಮಾಡಿ ವಾಲಿನಃ-ವಾಲಿಯ ವಧಾಯ-ವಧೆಗೆ ಆಯೋಧನಂ-ಯುದ್ಧವನ್ನು ವಿಧತ್ಸ್ವ-ಮಾಡು ಇತಿ ಎಂಬುದಾಗಿ ಪುನಃ-ಮತ್ತೆ ನ್ಯಯುಂಜತ್-ಕಳುಹಿಸಿದನು.

ಅನಂತರ ಆ ರಾಮಚಂದ್ರನು ವಾಲಿಯ ಬಲವನ್ನು ತಡೆದುಕೊಳ್ಳಲಾರದೆ ಭಯದಿಂದ ಓಡಿ, ನಾಚಿಕೆಯಿಂದ ತಲೆ ತಗ್ಗಿಸಿದ ಸುಗ್ರೀವನನ್ನು ಹೂವಿನ ಹಾರದಿಂದ ಅಲಂಕೃತನನ್ನಾಗಿ ಮಾಡಿ ವಾಲಿಯ ವಧೆಗೆ ಯುದ್ಧವನ್ನು ಮಾಡು ಎಂಬುದಾಗಿ ಪುನಃ ಅವನನ್ನು ಕಳುಹಿಸಿದನು.

ತಥಾಕುರ್ವತಿ ಸುಗ್ರೀವೇ ತರುಸ್ಕಂಧ ತಿರೋಹಿತಃ
ಜಘಾನ ರಾಮೋ ಬಾಣೇನ ವಾಲಿನಂ ಜಯಶಾಲಿನಂ ॥೫॥

ತಥಾ-ಹೀಗೆ ಸುಗ್ರೀವೇ-ಸುಗ್ರೀವನು ಕುರ್ವತಿಸತಿ-ಮಾಡುತ್ತಿರಲು ತರುಸ್ಕಂಧ ತಿರೋಹಿತಃ-ಮರದ ಕೊಂಬೆಯಿಂದ ಮರೆಸಲ್ಪಟ್ಟವನಾಗಿ ಕುಳಿತ ರಾಮಃ-ರಾಮನು ಜಯಶಾಲಿನಂ-ಜಯದಿಂದ ಮೆರೆಯುತ್ತಿದ್ದ ವಾಲಿನಂ-ವಾಲಿಯನ್ನು ಬಾಣೇನ-ಬಾಣದಿಂದ ಜಘಾನ-ಕೊಂದನು.

ಹೀಗೆ ಸುಗ್ರೀವನು ಯುದ್ಧ ಮಾಡುತ್ತಿರುವಾಗ ಮರದ ಕೊಂಬೆಯ ಮರೆಗೆ ಕುಳಿತ ರಾಮನು ಜಯಶಾಲಿಯಾದ ವಾಲಿಯನ್ನು ಬಾಣದಿಂದ ಕೊಂದನು.

ತಾರಾವಲೀ ಮುಖಗಣಾಸ್ತಾರೇಯಸ್ತರಣೇಸ್ಸುತಃ
ಭರ್ತೃನೇತೃಪಿತೃ ಭ್ರಾತೃದುಃಖೇನ ವ್ಯಲಪಂಶ್ಚಿರಂ ॥೬॥

ತತಃ-ಅನಂತರ ತಾರಾ-ತಾರೆಯೂ ವಲೀಮುಖ ಗಣಃ-ಕೋತಿಗಳ ಸಮೂಹವೂ, ತಾರೇಯಃ-ಅಂಗದನೂ ತರಣೇಸ್ಸುತಃ-ಸೂರ್ಯನ ಮಗನಾದ ಸುಗ್ರೀವನೂ ಭರ್ತೃನೇತೃಪಿತೃಭ್ರಾತೃ-ಗಂಡ, ಯಜಮಾನ, ತಂದೆ, ಸೋದರ(ವನ್ನು ಕಳೆದುಕೊಂಡ)ದುಃಖೇನ-ದುಃಖದಿಂದ ಚಿರಂ-ದೀರ್ಘಕಾಲ ವ್ಯಲಪನ್-ರೋಧಿಸಿದರು.

ತಾರೆ, ಕಪಿಗಣ, ಅಂಗದ ಮತ್ತು ಸೂರ್ಯಪುತ್ರ ಸುಗ್ರೀವರು ಗಂಡ, ಯಜಮಾನ, ತಂದೆ ಮತ್ತು ಸೋದರನ ಅಗಲಿಕೆಯ ದುಃಖದಿಂದ ದೀರ್ಘವಾಗಿ ರೋಧಿಸಿದರು.

ಗದ್ಯ ॥ ತದನು ನಿರ್ವ್ಯೂಢ ಸಂಗರೋ ರಘುಧುರಂಧರಃ ಪುರಂದರ ತನಯಸ್ಯ
ಔರ್ಧ್ವದೈಹಿಕಂ ಕೃತವಂತಂ ಕಪಿಸಾರ್ಥಿವಂ ತಂ ಅಭಿಷಿಚ್ಯ
ರಾಜ್ಯೇ ಮಾಲ್ಯವತಿ ಗಿರೌ ಅತಿ ವಾಹಯಾಂ ಚಕಾರ ವರ್ಷಾ ದಿವಸಾನ್ ॥

• ತದನು=ತದನಂತರ ನಿರ್ವ್ಯೂಢ=ಮುಕ್ತಾಯಗೊಳಿಸಲ್ಪಟ್ಟ ಸಂಗರಃ=ಪ್ರತಿಜ್ಞೆಯುಳ್ಳ ರಘುದುರಂಧರಃ=ರಘುರಾಮನು ಪುರಂದರತನಯಸ್ಯ=ಇಂದ್ರಪುತ್ರನಾದ ವಾಲಿಯ ಔರ್ಧ್ವದೈಹಿಕಂ=ಉತ್ತರ ಕ್ರಿಯಾದಿಗಳನ್ನು ಕೃತವಂತಂ=ಮಾಡಿದ ಕಪಿಸಾರ್ಥಿವಂ=ಕಪಿವೀರನಾದ ತಂ=ಆ ಸುಗ್ರೀವನನ್ನೂ ರಾಜ್ಯೇ=ರಾಜ್ಯದಲ್ಲಿ ಅಭಿಷಿಚ್ಯ=ಪಟ್ಟಾಭಿಷೇಕ ಮಾಡಿ ಮಾಲ್ಯವತಿ ಗಿರೌ=ಮಾಲ್ಯವಂತ ಪರ್ವತದಲ್ಲಿ ವರ್ಷಾ ದಿವಸಾನ್=ಮಳೆಗಾಲದ ದಿನಗಳನ್ನೂ ಅತಿವಾಹಯಾಂ ಚಕಾರ=ಕಳೆದನು.

ನಂತರ ಪ್ರತಿಜ್ಞೆಯನ್ನು ಪೂರೈಸಿದ ರಾಘವನು ಇಂದ್ರಪುತ್ರ ವಾಲಿಯ ಉತ್ತರ ಕ್ರಿಯಾದಿಗಳನ್ನು ನೆರವೇರಿಸಿದ ಸುಗ್ರೀವನನ್ನು ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿ ಮಾಲ್ಯವಂತ ಪರ್ವತದಲ್ಲಿ ಮಳೆಗಾಲದ ದಿವಸಗಳನ್ನು ಕಳೆಯುತ್ತಿದ್ದನು.

ಗದ್ಯ ॥ ತತೋ ರಾಜ್ಯ ಸೌಖ್ಯಾನುಭವ ಪ್ರಮತ್ತಂ ಮರ್ಕಟಪತಿಂ
ಸೌಮಿತ್ರಿರ್ಭೀಷಯಿತ್ವಾ ರಾಮನಿಕಟಂ ನಿನಾಯ ॥

ತತಃ=ಅನಂತರ ರಾಜ್ಯ ಸೌಖ್ಯಾನುಭವ ಪ್ರಮತ್ತಂ=ರಾಜ ಸೌಖ್ಯವನ್ನು ಅನುಭವಿಸುತ್ತ ಮದಿಸಿದವನಾದ ಕಪಿರಾಜ ಸುಗ್ರೀವನನ್ನು ಸೌಮಿತ್ರಿಃ=ಸುಮಿತ್ರಾ ನಂದನನಾದ ಲಕ್ಷ್ಮಣನು ಭೀಷಯಿತ್ವಾ=ಭಯಪಡಿಸಿ ರಾಮನಿಕಟಂ=ರಾಮನ ಸಮೀಪವನ್ನು ನಿನಾಯ=ಸೇರಿಸಿದನು.

ಅನಂತರದಲ್ಲಿ ರಾಜ್ಯಸುಖಾನುಭವದಿಂದ ಮದಿಸಿದ ಕಪಿರಾಜ ಸುಗ್ರೀವನನ್ನು ಸುಮಿತ್ರಾ ನಂದನ ಲಕ್ಷ್ಮಣನು ಭಯಪಡಿಸಿ ರಾಮನ ಸಮೀಪವನ್ನು ಸೇರಿಸಿದನು.

ಸೀತಾಂ ವಿಚೇತುಂ ಪ್ಲವಗಾನ್
ಸರ್ವಾನಾಹೂಯಭಾನುಜಃ
ವಿಧಾಯ ಮಾಸಮವಧಿಂ
ಪ್ರಾಸ್ಥಾಪೀತ್ ಸಕಲಾದಿಶಃ ॥೭॥

ಭಾನುಜಃ=ಸೂರ್ಯಪುತ್ರ ಸುಗ್ರೀವನು ಸೀತಾಂ=ಸೀತೆಯನ್ನು ವಿಚೇತುಂ=ಹುಡುಕುವುದಕ್ಕಾಗಿ ಸರ್ವಾನ್=ಎಲ್ಲಾ ಪ್ಲವಗಾನ್=ವಾನರರನ್ನೂ ಆಹೂಯ=ಕರೆದು ಮಾಸಂ=ತಿಂಗಳ ಅವಧಿಂ=ಅವಧಿಯನ್ನು ವಿಧಾಯ=ವಿಧಿಸಿ ಸಕಲಾಃ=ಎಲ್ಲಾ ದಿಶಃ=ದಿಕ್ಕುಗಳಿಗೂ ಪ್ರಾಸ್ಥಾಪೀತ್=ಕಳುಹಿಸಿದನು.

ಸೂರ್ಯಪುತ್ರ ಸುಗ್ರೀವನು ಸೀತೆಯನ್ನು ಹುಡುಕುವುದಕ್ಕಾಗಿ ಎಲ್ಲಾ ವಾನರರನ್ನೂ ಕರೆಸಿ ಒಂದು ತಿಂಗಳ ಅವಧಿಯನ್ನು ವಿಧಿಸಿ ಎಲ್ಲಾ ದಿಕ್ಕುಗಳಿಗೂ ಕಳುಹಿಸಿಕೊಟ್ಟನು.

ಹನೂಮಜ್ಜಾಂಬವದಂಗದನೀಲಪ್ರಮುಖಾ
ಯಾಮ್ಯಾಂ ದಿಶಮಧಿಗತಾಃ

ದ್ವಾದಶಯೋಜನ ಪರಿಮಿತ ಮಿರಿಣಂ
ಪ್ರಾಪ್ಯ ಶ್ರಾಂತಾಃ ಪ್ರಯಯುರ್ವಿಪಿನಂ ॥೭॥

ಹನುಮಜ್ಜಾಂಬವದಂಗದನೀಲಪ್ರಮುಖಾಃ=ಹನುಮಂತ, ಜಾಂಬವಂತ, ಅಂಗದ, ನೀಲ ಮುಂತಾದ ಪ್ರಮುಖರು ಯಾಮ್ಯಾಂ=ಯಮನ ದಿಶಂ=ದಿಕ್ಕನ್ನು ಅಭಿಯಾತಾಃ=ಕುರಿತು ನಡೆದರು. ದ್ವಾದಶ ಯೋಜನ ಪರಿಮಿತಂ ಇರಿಣಂ=ಹನ್ನೆರಡು ಯೋಜನ ಪ್ರಮಾಣದ ಮರಳುಭೂಮಿಯನ್ನು ಪ್ರಾಪ್ಯ=ಸೇರಿ ಶ್ರಾಂತಾಃ=ಆಯಾಸಗೊಂಡು ವಿಪಿನಂ=ಕಾಡನ್ನು ಪ್ರಯಯುಃ=ಪ್ರವೇಶಿಸಿದರು.

ಹನುಮಂತ, ಜಾಂಬವಂತ, ಅಂಗದ, ನೀಲ ಮುಂತಾದ ಪ್ರಮುಖರು ದಕ್ಷಿಣ ದಿಕ್ಕನ್ನು ಕುರಿತು ನಡೆದರು. ದಾರಿಯಲ್ಲಿ ಹನ್ನೆರಡು ಯೋಜನ ಪ್ರಮಾಣದ ಮರಳು ಭೂಮಿಯನ್ನು ಸೇರಿ ಆಯಾಸಪಟ್ಟು, ಮುಂದೆ ಕಾಡನ್ನು ಪ್ರವೇಶಿಸಿದರು.

ತತಸ್ಸ್ವಯಂಪ್ರಭಾಗುಹಾಂ ಪ್ರವಿಶ್ಯ ಹೇಮ ಪಾದಪಾಂ
ಮಧೂಪಹಾರ ವಿಸ್ಮೃತಸ್ವಕಾರ್ಯಗೌರವಾ ಅಭವನ್
ಗತೇವಧೌ ಕದಾಚನ ಪ್ಲವಂಗ ಮೇನಕೇನಚಿತ್
ಪ್ರಬೋಧಿತಾಃ ವಿಲೇಪುರುಚ್ಚಕೈಃ ಅಮೀಪ್ಲವಂಗಮಾಃ ॥೮॥

ತತಃ=ಅನಂತರ ಹೇಮಪಾದಪಾಂ=ಚಿನ್ನದ ಮರಗಳಿಂದ ಕೂಡಿದ ಸ್ವಯಂಪ್ರಭಾಗುಹಾಂ=ಸ್ವಯಂಪ್ರಭೆ ಎನ್ನುವವಳ ಗುಹೆಯನ್ನು ಪ್ರವಿಶ್ಯ=ಪ್ರವೇಶಿಸಿ ಮಧೂಪಹಾರ=ಮಧುವಿನ ಸೇವನೆಯಿಂದ ವಿಸ್ಮೃತ=ಮರೆಯಲ್ಪಟ್ಟ ಸ್ವಕಾರ್ಯಗೌರವಾಃ=ತಮ್ಮ ಕೆಲಸವುಳ್ಳವರು ಅಭವನ್=ಆದರು. ಅವಧೌಗತೇ=ಅವಧಿಯು ಮುಗಿಯಲಾಗಿ ಕದಾಚನ್=ಒಮ್ಮೆ ಕೇನಚಿತ್=ಒಂದು ಪ್ಲವಂಗಮೇನ=ವಾನರನಿಂದ ಪ್ರಬೋಧಿತಾಃ=ಎಚ್ಚೆತ್ತವರಾಗಿ ಅಮೀ=ಈ ಪ್ಲವಂಗಮಾಃ=ವಾನರರು ಉಚ್ಚಕೈಃ=ಜೋರಾಗಿ ವಿಲೇಪುಃ=ರೋಧಿಸಲಾರಂಭಿಸಿದರು.

ಅನಂತರ ಚಿನ್ನದ ಮರಗಳನ್ನು ಹೊಂದಿದ ಸ್ವಯಂಪ್ರಭೆ ಎನ್ನುವವಳ ಗುಹೆಯನ್ನು ಪ್ರವೇಶಿಸಿ ಅಲ್ಲಿ ಮಧುಸೇವನೆಯಿಂದ ತಮ್ಮ ಕಾರ್ಯಗಳನ್ನೆಲ್ಲ ಮರೆತವರಾಗಿ ನಿಯಮಿತ ಅವಧಿಯು ಮುಗಿಯಲು ಒಮ್ಮೆ ವಾನರನಿಂದ ಎಚ್ಚರಿಸಲ್ಪಟ್ಟು ಈ ವಾನರರೆಲ್ಲಿ ಉಚ್ಚ ಕಂಠದಿಂದ ರೋಧಿಸತೊಡಗಿದರು.

ಗದ್ಯ ॥ ಅಥ ಗುಹಾಧಿನಾಥಾ ಸ್ವಯಂಪ್ರಭಾಚೇಮಾನ್ ರಾಮದೂತಾನ್
ವಿಜ್ಞಾಯ ಫಲೈರ್ಮಧುಭಿಶ್ಚ ಸಮಾರಾಧ್ಯ ನಿಮೀಲಿತ ನಯನಾನ್
ಕ್ಷಣಾದಿವ ಗುಹಾದ್ವಹಿರ್ನೀಯ ಗಿರಿಂ ಪ್ರಾವೇಶಯತ್ ॥

ಅಥ=ಅನಂತರದಲ್ಲಿ ಗುಹಾಧಿನಾಥಾ=ಗುಹೆಯ ಮುಖ್ಯಸ್ಥೆಯಾದ ಸ್ವಯಂಪ್ರಭಾಚ=ಸ್ವಯಂಪ್ರಭೆಯಾದರೋ ಇಮಾನ್=ಇವರನ್ನು ರಾಮದೂತಾನ್=ರಾಮದೂತರೆಂಬುದಾಗಿ ವಿಜ್ಞಾಯ=ತಿಳಿದು ಫಲೈರ್ಮಧುಭಿಶ್ಚ=ಫಲ ಮತ್ತು ಮಧುವಿನಿಂದ ಸಮಾರಾಧ್ಯ=ಸತ್ಕರಿಸಿ ನಿಮೀಲಿತನಯನಾನ್=ಮುಚ್ಚಲ್ಪಟ್ಟ ಕಣ್ಣುಗಳುಳ್ಳ (ಇವರನ್ನು)

ಕ್ಷಣಾದಿವ-ನಿಮಿಷ ಮಾತ್ರದಲ್ಲಿ, ಗುಹಾದ್ಬಹಿಃ-ಗುಹೆಯ ಹೊರಗಡೆಯಲ್ಲಿ, ವಿಂಧ್ಯಗಿರಿಂ-ವಿಂಧ್ಯ ಪರ್ವತ ಪ್ರಾಂತವನ್ನು ಪ್ರಾವೇಶಯತ್-ಪ್ರವೇಶಿಸುವಂತೆ ಮಾಡಿದಳು.

ನಂತರ ಗುಹೆಯ ಯಜಮಾನಿಯಾದ ಸ್ವಯಂಪ್ರಭೆಯಾದರೋ ಇವರನ್ನು ರಾಮದೂತರೆಂದು ತಿಳಿದವಳಾಗಿ ಫಲಮಧುಗಳಿಂದ ಸತ್ಕರಿಸಿ ಮುಚ್ಚಲ್ಪಟ್ಟ ಕಣ್ಣುಗಳುಳ್ಳ ಇವರನ್ನು ನಿಮಿಷ ಮಾತ್ರದಲ್ಲಿ ಗುಹೆಯ ಹೊರಗಡೆಯಲ್ಲಿನ ವಿಂಧ್ಯಗಿರಿ ಪ್ರಾಂತ್ಯವನ್ನು ಪ್ರವೇಶಿಸುವಂತೆ ಮಾಡಿದಳು.

ಜಾನಕ್ಯಲಾಭಾತ್ ಸಮಯಾತಿಪಾತಾತ್
ಪ್ರಾಯೋಪವಿಷ್ಟಾನ್ ಪ್ರಜಗಾದಕೀಶಾನ್
ಸಂಪಾತಿನಾಮಾ ಸಹಜೋಜಟಾಯೋಃ
ಲಂಕಾಂಪುರಸ್ಥಾಂ ರಘುವೀರ ಪತ್ನೀಂ ॥೧೦॥

ಜಾನಕ್ಯಲಾಭಾತ್-ಜಾನಕಿಯು ಸಿಕ್ಕದೇ ಇದ್ದುದರಿಂದಲೂ, ಸಮಯಾತಿಪಾತಾತ್-ಸಮಯವು ಮೀರಿಹೋದುದರಿಂದಲೂ ಪ್ರಾಯೋಪವಿಷ್ಟಾನ್-ಪ್ರಾಯೋಪವೇಶ ವ್ರತವನ್ನು ಮಾಡಲು ತೊಡಗಿದ ಕೀಶಾನ್-ಕಪಿಗಳನ್ನು ಜಟಾಯೋಃ-ಜಟಾಯುವಿನ ಸಹಜಃ-ಜೊತೆಯಲ್ಲಿ ಹುಟ್ಟಿದ ಸಂಪಾತಿನಾಮಾ-ಸಂಪಾತಿ ಎಂಬುವ ಹೆಸರಿನ ಹದ್ದು ರಘುವೀರ ಪತ್ನೀಂ- ರಾಮಚಂದ್ರನ ಪತ್ನಿಯಾದ ಸೀತೆಯನ್ನು ಲಂಕಾಂಪುರಸ್ಥಾಂ-ಲಂಕೆಯಲ್ಲಿರುವವಳಾಗಿ ಪ್ರಜಗಾದ-ಹೇಳಿತು.

ಜಾನಕಿಯು ಸಿಕ್ಕದೇ ಇದ್ದುದರಿಂದಲೂ, ಸಮಯವು ಮೀರಿಹೋದುದರಿಂದಲೂ ಉಪವಾಸ ವ್ರತವನ್ನು ಕೈಕೊಂಡ ಕಪಿಗಳನ್ನು ಕುರಿತು ಜಟಾಯುವಿನ ಒಡಹುಟ್ಟಿದ ಸಂಪಾತಿಯು ಸೀತೆಯು ಲಂಕೆಯಲ್ಲಿರುವುದಾಗಿ ತಿಳಿಸಿತು.

ಹೃಷ್ಟಾಃ ಸರ್ವೇ ದಶಮುಖಪುರೀಂ ಯಾತುಕಾಮಾಃ ಕಪೀಂದ್ರಾಃ
ದೃಷ್ಟ್ವಾಪಾರಂ ಜಲಧಿಮಭವನ್ ದಕ್ಷಿಣಂಭಗ್ನವೇಗಾಃ
ತುಷ್ಟಾವಾಥಶ್ವಸನತನಯಂ ಜಾಂಬವಾನ್ ಪೂರ್ವವೇದೀ
ತುಷ್ಟೋಽಸಾವಪ್ಯಭವದುದಧೇರ್ಲಂಘನೇ ಬದ್ಧಸಂಧಃ ॥೧೧॥

ಸರ್ವೇ-ಎಲ್ಲಾ ಕಪೀಂದ್ರಾಃ-ಕಪಿವೀರರೂ ದಶಮುಖಪುರೀಂ-ರಾವಣನ ಊರಾದ ಲಂಕೆಯನ್ನು ಯಾತುಕಾಮಾಃ-ಹೋಗಲು ಆಶೆಯುಳ್ಳವರಾಗಿ ಹೃಷ್ಟಾಃ ಸಂತಃ-ಸಂತೋಷಗೊಂಡು ಅಪಾರಂ-ದಾಟಲಾರದಂತಹ ದಕ್ಷಿಣಂಜಲಧಿಂ-ದಕ್ಷಿಣದ ಸಮುದ್ರವನ್ನು ದೃಷ್ಟ್ವಾ-ನೋಡಿ ಭಗ್ನವೇಗಾಃ-ಒಡೆಯಲ್ಪಟ್ಟ ಆಸೆಯುಳ್ಳವರಾಗಿ ಅಭವನ್-ಆದರು. ಅಥ-ಅನಂತರ ಪೂರ್ವವೇದೀ-ಹಿಂದೆ ನಡೆದ ವಿಷಯವನ್ನು ತಿಳಿದವನಾದ ಜಾಂಬವಾನ್-ಜಾಂಬವಂತನು ಶ್ವಸನತನಯಂ-ವಾಯುಪುತ್ರನನ್ನು ತುಷ್ಟಾವ-ಸ್ತುತಿಸಿದನು. ತುಷ್ಟಃ-ಅಸೌ ಅಪಿ-ಸಂತೋಷಗೊಂಡ ಅವನಾದರೋ ಉದಧೇಃ-ಸಮುದ್ರದ ಲಂಘನೇ-ಹಾರುವಿಕೆಯಲ್ಲಿ ಬದ್ಧಸಂಧಃ-ಮಾಡಲ್ಪಟ್ಟ ಪ್ರತಿಜ್ಞೆ ಉಳ್ಳವನಾದನು.

ಎಲ್ಲಾ ಕಪಿವೀರರೂ ರಾವಣನ ಊರಾದ ಲಂಕೆಯನ್ನು ಸೇರಲು ಆಶೆಯುಳ್ಳವರಾಗಿ

ಸಂತೋಷಗೊಂಡರು. ಆದರೆ ಅಪಾರವಾದ ದಕ್ಷಿಣ ಸಮುದ್ರವನ್ನು ನೋಡಿ ಅವರ ಆಸೆಯೆಲ್ಲ ಭಗ್ನವಾಯಿತು. ಅನಂತರ ಹಿಂದೆ ನಡೆದ ವಿಚಾರಗಳನ್ನು ಬಲ್ಲವನಾಗಿದ್ದ ಜಾಂಬವಂತನು ವಾಯುಪುತ್ರನನ್ನು ಸ್ತುತಿಸಲು ಸಂತೋಷಗೊಂಡ ಅವನು ಸಮುದ್ರ ಲಂಘನ ಮಾಡಲು ಪ್ರತಿಜ್ಞೆ ಮಾಡಿ ಸಿದ್ಧನಾದನು.

*ಇತಿ ಕಿಷ್ಕಿಂಧಾ ಕಾಂಡಃ*

*ಕಿಷ್ಕಿಂಧಾ ಕಾಂಡವು ಮುಗಿಯಿತು.*

# ಅಥ ಸುಂದರ ಕಾಂಡಃ

# ಸುಂದರಕಾಂಡ

**ತತೋ ಮಹೇಂದ್ರಶಿಖರಾದುತ್ಪ್ಲುತ್ಯ ಹನುಮಾನ್ ಬಲೀ**
**ಸುರಸಾ ಸಿಂಹಿಕೇ ಹತ್ವಾ ಲಂಕಾದ್ಬಹಿರವಾತರತ್ ॥೧॥**

ತತಃ=ಅನಂತರ ಬಲೀ=ಬಲಶಾಲಿಯಾದ ಹನುಮಾನ್=ಹನುಮಂತನು ಮಹೇಂದ್ರ ಶಿಖರಾತ್=ಮಹೇಂದ್ರ ಪರ್ವತದ ಶಿಖರದಿಂದ ಉತ್ಪ್ಲುತ್ಯ=ಹಾರಿ ಸುರಸಾಸಿಂಹಿಕೇ ಹತ್ವಾ=ಸುರಸೆ, ಸಿಂಹಿಕೆ ಎಂಬ ರಾಕ್ಷಸಿಯರನ್ನು ಸಂಹರಿಸಿ ಲಂಕಾತ್‌ಬಹಿಃ=ಲಂಕಾಪಟ್ಟಣದ ಹೊರಗಡೆಯಲ್ಲಿ ಅವಾತರತ್=ಇಳಿದನು.

ಅನಂತರ ಬಲಶಾಲಿಯಾದ ಹನುಮಂತನು ಮಹೇಂದ್ರ ಪರ್ವತದ ಶಿಖರದಿಂದ ಹಾರಿ ಸುರಸೆ ಮತ್ತು ಸಿಂಹಿಕೆ ಎನ್ನುವ ರಾಕ್ಷಸಿಯರನ್ನು ಸಂಹರಿಸಿ ಲಂಕಾಪಟ್ಟಣದ ಹೊರಗೆ ಇಳಿದನು.

**ಸಾಯಂ ಪ್ರವಿಶ್ಯ ಲಂಕಾಯಾಂ ಸರ್ವತ್ರ ವಿಚಿಕಾಯ ಸಃ**
**ಕುತ್ರಾಪ್ಯದೃಷ್ಟ್ವಾ ವೈದೇಹೀಂ ರಾವಣಾಂತಃಪುರಂ ಯಯೌ ॥೨॥**

ಸಃ=ಅವನು ಸಾಯಂ=ಸಾಯಂಕಾಲದಲ್ಲಿ ಲಂಕಾಯಾಂ=ಲಂಕೆಯಲ್ಲಿ ಪ್ರವಿಶ್ಯ=ಪ್ರವೇಶಿಸಿ ಸರ್ವತ್ರ=ಎಲ್ಲಾ ಜಾಗಗಳಲ್ಲಿಯೂ ವಿಚಿಕಾಯ=ಹುಡುಕಿದನು. ವೈದೇಹೀಂ=ಸೀತೆಯನ್ನು ಕುತ್ರಾಪಿ=ಎಲ್ಲಿಯೂ ಸಹ ಅದೃಷ್ಟ್ವಾ=ಕಾಣಲಾರದೆ ರಾವಣಾಂತಃಪುರಂ=ರಾವಣನ ಅಂತಃ ಪುರವನ್ನು ಯಯೌ=ಸೇರಿದನು.

ಅವನು ಸಾಯಂಕಾಲದಲ್ಲಿ ಲಂಕಾಪಟ್ಟಣವನ್ನು ಪ್ರವೇಶಿಸಿ ಅಲ್ಲಿನ ಎಲ್ಲಾ ಭಾಗಗಳಲ್ಲಿಯೂ ಹುಡುಕಿದನು. ಆದರೆ ಸೀತೆಯನ್ನು ಎಲ್ಲಿಯೂ ಕಾಣಲಾರದ ಕಡೆಗೆ ರಾವಣನ ಅಂತಃಪುರವನ್ನು ಸೇರಿದನು.

**ಗದ್ಯ ॥ ತತ್ರರತ್ನಪರ್ಯಂಕೇ, ರಾವಣೇನಸಹಶಯಾನಾಂ, ರತಿಮಿವ ತ್ರಿಭುವನ**
**ಸುಂದರೀಂ,ಮಂಡೋದರೀಂ ನಿರೀಕ್ಷ್ಯ, ಸಮ್ಯಕ್ತಾವತ್ ಸೀತೇತಿ ಮುದಿತಃ, ಪವನತನಯಃ,**
**ರಾಮಸ್ಯ ಧರ್ಮಪತ್ನೀ ನೈವಂಭವೇದಿತಿ ನಿಶ್ಚಿತ್ಯ, ಪುರಸ್ತಾತ್ ಪ್ರಾಸಾದಾನಾಂ ಅನ್ವಿಷ್ಯ,**
**ಅಶೋಕವನಿಕಾಯಾಂ ವಿಕಟಾಭಿರಿವ ಭಯಂಕರಾಭಿಃ ರಾತ್ರಿಂಚರೀಭಿಃ,**
**ಭರ್ತ್ಸ್ಯಮಾನಾಂ, ಕನಕಸಾಲಭಂಜಿಕಾಮಿವ ಅವನಿದುಹಿತರಮವೇಕ್ಷ್ಯ,**
**ತನ್ನಿವಾಸಭೂತಸ್ಯ ಶಿಂಶುಪಾತರೋರುಪರಿ, ಪತ್ರಸಂಚಯೇ ನಿಲೀಯ,**
**ಶೃಣ್ವಂ ಸ್ತದಾಲಾಪಾನ್ ಅವತಸ್ಥೇ ॥**

ತತ್ರ=ಅಲ್ಲಿ ರತ್ನಪರ್ಯಂಕೇ=ರತ್ನಗಳಿಂದ ಕೂಡಿದ ಮಂಚದಲ್ಲಿ ರಾವಣೇನ ಸಹ=ರಾವಣನ ಜೊತೆ ಶಯಾನಾಂ=ಮಲಗಿದ ರತಿಮಿವ=ರತಿಯೋಪಾದಿಯಲ್ಲಿ ತ್ರಿಭುವನ ಸುಂದರೀಂ=ತ್ರಿಲೋಕ

ಸುಂದರಿಯಾದ ಮಂಡೋದರೀಂ=ಮಂಡೋದರಿಯನ್ನು ನಿರೀಕ್ಷ್ಯ=ನೋಡಿ ಕ್ಷಿತಿಸುತಾ=ಭೂಸುತೆಯಾದ ಸೀತೆಯು ಸಮೀಕ್ಷಿತಾ=ಕಂಡು ಹಿಡಿಯಲ್ಪಟ್ಟಳು ಇತಿ=ಎಂಬುದಾಗಿ ಮುದಿತಃ=ಸಂತೋಷಿಸಿದ ಪವನತನಯಃ=ಹನುಮಂತನು ಕಾಕುತ್ಸ್ಥ ಧರ್ಮಪತ್ನೀ=ಕಾಕುತ್ಸ್ಥ ವಂಶಜನಾದ ಶ್ರೀರಾಮನ ಹೆಂಡತಿಯು ಏವಂ=ಈ ರೀತಿಯಾಗಿ ನಭವೇತ್=ಇರಲಾರಳು ಇತಿ=ಎಂದು ವಿಮೃಶ್ಯ=ವಿಮರ್ಶಿಸಿ ಪುರಸ್ತಾತ್=ಹೊರಗಡೆಯ ಪಾನಶಾಲಾ=ಪಾನಶಾಲೆಯನ್ನು ಅನ್ವಿಷ್ಯ=ಹುಡುಕಿ ಅಶೋಕವನಿಕಾಯಾಂ=ಅಶೋಕವನದಲ್ಲಿ ಪಿಶಾಚೀಭಿರಿವ=ಪಿಶಾಚಿಗಳಂತಿರುವ ಭಯಂಕರಾಭಿಃ=ಭಯಂವನ್ನುಂಟು ಮಾಡುವ (ರೂಪದ) ರಾತ್ರಿಂಚರೀಭಿಃ=ರಾಕ್ಷಸ ಸ್ತ್ರೀಯರಿಂದ ಧರ್ಷ್ಯಮಾಣಾಂ=ನಿಂದಿಸಲ್ಪಟ್ಟ ಕನಕಸಾಲಭಂಜಿಕಾಮಿವ=ಚಿನ್ನದ ಪುತ್ಥಳಿಯಂತಿದ್ದ ಅವನಿದುಹಿತರಂ=ಭೂಪುತ್ರಿಯಾದ ಸೀತೆಯನ್ನು ಅವೇಕ್ಷ್ಯ=ನೋಡಿ ತನ್ನಿವಾಸ ಭೂತಸ್ಯ=ಅವಳು ಕುಳಿತ ಸ್ಥಳವಾಗಿದ್ದ ಶಿಂಶುಪಾತರೋರುಪರಿ=ಶಿಂಶುಪಾ ವೃಕ್ಷದ ಮೇಲೆ ಪತ್ರ ಸಂಚಯೇ=ಎಲೆಗಳ ಗುಂಪಿನಲ್ಲಿ ನಿಲೀಯ=ಮರೆದು ತದಾಲಾಪಾನ್=ಅವಳ ಮಾತುಗಳನ್ನು ಶೃಣ್ವನ್=ಕೇಳುತ್ತಾ ಅವತಸ್ಥೆ=ಇದ್ದನು.

ಅಲ್ಲಿನ ರತ್ನಮಂಚದಲ್ಲಿ ರಾವಣನ ಜೊತೆ ಮಲಗಿದ್ದ ರತಿಯಂತೆ ತ್ರಿಭುವನ ಸುಂದರಿಯಾಗಿದ್ದ ಮಂಡೋದರಿಯನ್ನು ಕಂಡು ಭೂಸುತೆಯಾದ ಸೀತೆಯನ್ನೇ ಕಂಡು ಹಿಡಿದೆನೆಂದು ಸಂತೋಷಿಸಿದ ಹನುಮಂತನು ಕಾಕುತ್ಸ್ಥನ ಧರ್ಮಪತ್ನಿಯು ಈ ರೀತಿ ಇರುವಳೆ, ಇಲ್ಲ ಎಂಬುದಾಗಿ ಭಾವಿಸಿ ಹೊರಗಿನ ಪಾನಶಾಲೆಯನ್ನು ಹುಡುಕಿ, ಅಶೋಕವನಕ್ಕೆ ಬಂದು ಅಲ್ಲಿ ಪಿಶಾಚಿಯರಂತೆ ತೋರುತ್ತಿದ್ದ ಭಯಂಕರಾಕಾರರೂ ಆದ ರಾಕ್ಷಸ ಸ್ತ್ರೀಯರಿಂದ ನಿಂದಿಸಲ್ಪಡುತ್ತಿದ್ದ ಕನಕಸಾಲ ಭಂಜಿಕೆಯಂತೆ ಪ್ರಕಾಶಿಸುತ್ತಿದ್ದ ಸೀತೆಯನ್ನು ಕಂಡನು. ಅವಳು ಕುಳಿತಿದ್ದ ಶಿಂಶುಪಾವೃಕ್ಷದ ಮೇಲೆ ಎಲೆಗಳ ಮರೆಯಲ್ಲಿ ಕುಳಿತು ಅವಳ ಮಾತುಗಳನ್ನು ಕೇಳುತ್ತಿದ್ದನು.

ತತೋಽತೀತ ತ್ರಿಯಾಮಾಯಾಂ ತ್ರಿಯಾಮಾಯಾಂ ದಶಾನನಃ
ಪ್ರಬುಧ್ಯಾಗತ್ಯ ವೈದೇಹೀಂ ಭವಭಾರ್ಯೇತ್ಯಯಾಚತ ||೩||

ತತಃ=ಅನಂತರದಲ್ಲಿ ದಶಾನನಃ=ರಾವಣನು ತ್ರಿಯಾಮಾಯಾಂ=ರಾತ್ರಿಯ ತ್ರಿಯಾಮಾಯಾಂಸತ್ಯಾಂ=ಮೂರು ಝಾಮಗಳು ಕಳೆಯುತ್ತಿರಲು ಪ್ರಬುಧ್ಯ=ಎದ್ದು ಆಗತ್ಯ=(ಅಶೋಕವನಕ್ಕೆ) ಬಂದು ವೈದೇಹೀಂ=ಸೀತೆಯನ್ನು ಭಾರ್ಯಾಭವ=ಹೆಂಡತಿಯಾಗು ಇತಿ=ಹೀಗೆಂದು ಅಯಾಚತ=ಯಾಚಿಸಿದನು.

ಅನಂತರದಲ್ಲಿ ರಾವಣನು ರಾತ್ರಿಯ ಮೂರು ಝಾಮಗಳು ಮುಗಿದಿರಲು ಎದ್ದು ಅಶೋಕವನಕ್ಕೆ ಬಂದು ಸೀತೆಯನ್ನು "ನನ್ನ ಹೆಂಡತಿಯಾಗು" ಎಂದು ಬೇಡಿದನು.

ತೃಣಾಯಾಮನ್ಯಮಾನಾಸಾ ರಾವಣಂ ರಾಕ್ಷಸೇಶ್ವರಂ
ನಿನಿಂದವಿವಿಧೈರ್ವಾಕ್ಯೈಃ ಪರುಷೈಃ ಕರ್ಣದಾರಿಭಿಃ ||೪||

ರಾಕ್ಷಸೇಶ್ವರಂ=ರಾಕ್ಷಸ ರಾಜನಾದ ರಾವಣಂ=ರಾವಣನನ್ನು ತೃಣಾಯ ಮನ್ಯಮಾನಾ=ಹುಲುಕಡ್ಡಿಯಂತೆ ಭಾವಿಸಿ ಸಾ=ಆಕೆಯು (ಸೀತೆಯು) ಕರ್ಣದಾರಿಭಿಃ=ಕಿವಿಬಿರಿಯುವಂತಹ ಪರುಷೈಃ=ಕಠೋರವಾದ ವಿವಿಧೈಃ=ಹಲವು ರೀತಿಯ ವಾಕ್ಯೈಃ=ಮಾತುಗಳಿಂದ ನಿನಿಂದ=ಜರಿದಳು.

ರಾಕ್ಷಸ ರಾಜ ರಾವಣನನ್ನು ಹುಲ್ಲುಕಡ್ಡಿಯಂತೆ ಭಾವಿಸಿ ಜಾನಕಿಯು ಅವನನ್ನು ಕಿವಿ ಬಿರಿಯುವಂತಹ ಕಠೋರವಾದ ಹಲವು ಮಾತುಗಳಿಂದ ಜರಿದಳು.

ಅಥ ನಕ್ತಂಚರಪತೌ ಸೀತಯಾ ಧಿಕ್ಕೃತೇ ಗತೇ
ರಾಕ್ಷಸ್ಯಃ ಕ್ರೋಧ ಸಂರಬ್ಧಾಃ ಜಾನಕೀಂ ಸಮತರ್ಜಯನ್ ॥೫॥

ನಕ್ತಂಚರಪತೌ=ರಾಕ್ಷಸರ ಯಜಮಾನನಾದ ರಾವಣನು ಸೀತಯಾ=ಸೀತೆಯಿಂದ ಧಿಕ್ಕೃತೇ=ಧಿಕ್ಕರಿಸಲ್ಪಟ್ಟು, ಗತೇಸತಿ=ಹೊರಟುಹೋಗಲು ಅಥ=ಅನಂತರ ಕ್ರೋಧಸಂರಬ್ಧಾಃ =ಕೋಪದಿಂದ ಕೆರಳಿದ ರಾಕ್ಷಸ್ಯಃ=ರಾಕ್ಷಸಿಯರು ಜಾನಕೀಂ=ಜಾನಕಿಯನ್ನು ಸಮತರ್ಜಯನ್=ಮೂದಲಿಸತೊಡಗಿದರು.

ರಾಕ್ಷಸ ಯಜಮಾನ ರಾವಣನು ಸೀತೆಯಿಂದ ಧಿಕ್ಕರಿಸಲ್ಪಟ್ಟು ಹೊರಟುಹೋದನಂತರ ಕೋಪದಿಂದ ಕೆರಳಿದ ರಾಕ್ಷಸಿಯರು ಜಾನಕಿಯನ್ನು ಮೂದಲಿಸಲಾರಂಭಿಸಿದರು.

ಅಶಕ್ನುವಂತೀ ತಾಂಬಾಧಾಂ ಸೋಢುಮುದ್ಬಂಧನಾದಸೂನ್
ಮೋಕ್ತುಂ ಪಾದಪಶಾಖಾಯಾಂ ವೇಣೀಮಾಸಂಜಯನ್ತ್ಯಭೂತ್ ॥೬॥

ಸಾ=ಸೀತೆಯು ತಾಂಬಾಧಾಂ=ಆ ರಾಕ್ಷಸಿಯರ ಬಾಧೆಯನ್ನು ಸೋಢುಂ=ತಡೆದುಕೊಳ್ಳಲು ಅಶಕ್ನುವಂತೀ ಸತಿ=ಅಸಮರ್ಥಳಾಗುತ್ತಿರಲು ಉದ್ಬಂಧನಾತ್= ನೇಣು ಹಾಕಿಕೊಳ್ಳುವುದರ ದೆಸೆಯಿಂದ ಅಸೂನ್=ಉಸಿರನ್ನು ಮೋಕ್ತುಂ=ಬಿಡಲು ಪಾದಪಶಾಖಾಯಾಂ=ಮರದ ಕೊಂಬೆಯಲ್ಲಿ ವೇಣೀಂ=ಜಡೆಯನ್ನು ಅಸಂಜಯಂತೀ=ಕಟ್ಟಿಕೊಳ್ಳುತ್ತಾ ಅಭೂತ್= ಇದ್ದಳು.

ಆ ಸೀತೆಯು ರಾಕ್ಷಸಿಯರ ಬಾಧೆಯನ್ನು ತಡೆದುಕೊಳ್ಳಲಾರದೇ ನೇಣು ಹಾಕಿಕೊಂಡು ಪ್ರಾಣವನ್ನು ಬಿಡಲು ನಿರ್ಧರಿಸಿ ಮರದ ಕೊಂಬೆಗೆ ಜಡೆಯನ್ನು ಕಟ್ಟಿಕೊಂಡಳು.

ತತೋಽವತೀರ್ಯ ಹನುಮಾನ್ ಅಭಿವಾದ್ಯಮಹೀಸುತಾಂ
ದೇವಿ ಮಾಂವಿದ್ಧಿ ರಾಮಸ್ಯ ದೂತಮಿತ್ಯಬ್ರವೀದ್ವಚಃ ॥೭॥

ತತಃ=ಅನಂತರ ಹನುಮಾನ್=ಹನುಮಂತನು ಅವತೀರ್ಯ=(ಮರದಿಂದ) ಇಳಿದು ಮಹೀಸುತಾಂ=ಭೂಸುತೆಯಾದ ಸೀತೆಯನ್ನು ಅಭಿವಾದ್ಯ=ನಮಸ್ಕರಿಸಿ ದೇವಿ=ಎಲೈ ದೇವಿಯೇ ಮಾಂ=ನನ್ನನ್ನು ರಾಮಸ್ಯದೂತಂ=ರಾಮಚಂದ್ರನ ದೂತನೆಂದು ವಿದ್ಧಿ=ತಿಳಿ ಇತಿ=ಹೀಗೆ ವಚಃ =ಮಾತನ್ನು ಅಬ್ರವೀತ್=ಹೇಳಿದನು.

ಅನಂತರ ಹನುಮಂತನು ಮರದಿಂದ ಇಳಿದು ಭೂಸುತೆ ಸೀತೆಯನ್ನು ನಮಸ್ಕರಿಸಿ "ಎಲೈ ದೇವಿಯೇ! ನನ್ನನ್ನು ರಾಮಚಂದ್ರನ ದೂತನೆಂಬುದಾಗಿ ತಿಳಿ" ಎಂದು ನುಡಿದನು.

ಗಣಯಂತ್ಯಾಮಥಾತ್ಮಾನಂ ರಾವಣಂ ಕಾಮರೂಪಿಣಂ
ವಿಶ್ವಾಸಾಯ ದದೌ ಧೀಮಾನ್ ರಾಮನಾಮಾಂಗುಳೀಯಕಂ ॥೮॥

ಅಥ=ಅನಂತರ ಆತ್ಮಾನಾಂ=ತನ್ನನ್ನು ಕಾಮರೂಪಿಣಂ=ಇಷ್ಟಬಂದ ವೇಷವನ್ನು ಧಾರಣ ಮಾಡಬಲ್ಲ ಶಕ್ತಿಯುಳ್ಳ ರಾವಣಂ=ರಾವಣನೆಂದು ಗಣಯಂತ್ಯಾಃ=ತಿಳಿದುಕೊಂಡ ಸೀತೆಗೆ

ವಿಶ್ವಾಸಾಯ-ನಂಬಿಕೆಗೆ ಧೀಮಾನ್=ಬುದ್ಧಿಶಾಲಿಯಾದ ಹನುಮಂತನು ರಾಮನಾಮಾಂಗುಳೀಯಕಂ=ರಾಮನ ಹೆಸರುಳ್ಳ ಉಂಗುರವನ್ನು ದದೌ=ಕೊಟ್ಟನು.

ಅನಂತರ ತನ್ನನ್ನು ಕಾಮರೂಪಿಯಾದ ರಾವಣನೆಂದು ತಿಳಿದ ಸೀತೆಯ ಸಂದೇಹ ಪರಿಹಾರಕ್ಕಾಗಿ ರಾಮನ ಹೆಸರಿನ ಉಂಗುರವನ್ನು ನೀಡಿದನು.

ಕಥಯಾಮಾಸ ಹನುಮಾನ್ ಕಾಕಾಸುರ ಕಥಾಮಪಿ
ವಿಸ್ರಬ್ಧಾ ಚಾಥಮುದಿತಾಜಾನಕೀ ಕಪಿಮಬ್ರವೀತ್ ॥೯॥

ಹನುಮಾನ್=ಹನುಮಂತನು ಕಾಕಾಸುರ ಕಥಾಂ ಅಪಿ=ಕಾಕಾಸುರನ ಕಥೆಯನ್ನು ಸಹ ಕಥಯಾಮಾಸ=ಹೇಳಿದನು. ಅಥ=ಅನಂತರ ವಿಸ್ರಬ್ಧಾ=ನಂಬಿಕೆ ಹೊಂದಿದ ಮುದಿತಾಚ=ಮತ್ತು ಸಂತೋಷವನ್ನೂ ಹೊಂದಿದ ಜಾನಕೀ=ಸೀತೆಯು ಕಪಿಂ=ಹನುಮಂತನನ್ನೂ (ಕುರಿತು) ಅಬ್ರವೀತ್=ಹೇಳಿದಳು.

ಹನುಮಂತನು ಕಾಕಾಸುರನ ಕಥೆಯನ್ನು ಸಹ ಹೇಳಲಾಗಿ ಅದರಿಂದ ನಂಬಿಕೆಗೊಂಡ ಸೀತೆಯು ಸಂತೋಷ ಹೊಂದಿ ಹನುಮಂತನಿಗೆ ಹೀಗೆ ಹೇಳಿದಳು.

ಮಾಸೇಭವಾನ್ ರಘುಪತಿಂ ಸಹಲಕ್ಷ್ಮಣೇನ
ನಾನೇಷ್ಯಸೀಯದಿ ಭವಾಮಿ ಪರಾಸುರೇವಂ
ಸಂದಿಶ್ಯ ವಲ್ಕದಶಯಾಪಿಹಿತಂ ಮಹಾರ್ಘಂ
ಚೂಡಾಮಣಿಂ ಕಪಿವರಸ್ಯ ಕರೇ ದದೌಸಾ ॥೧೦॥

ಭವಾನ್=ನೀನು ಲಕ್ಷ್ಮಣೇನಸಹ=ಲಕ್ಷ್ಮಣನಿಂದ ಒಡಗೂಡಿ ರಘುಪತಿಂ=ರಘುಪತಿಯಾದ ರಾಮನನ್ನು ಮಾಸೇ=ಒಂದು ತಿಂಗಳೊಳಗೆ ನ ಆನೇಷ್ಯಸಿಯದಿ=ಕರೆದು ತರದೇ ಇದ್ದಲ್ಲಿ ಪರಾಸುಃ=ಜೀವವನ್ನು ಬಿಡುವವಳು ಭವಾಮಿ=ಆಗುತ್ತೇನೆ ಏವಂ=ಎಂಬುದಾಗಿ ಸಂದಿಶ್ಯ=ಸಂದೇಶ ನೀಡಿ ವಲ್ಕದಶಯಾ=ವಸ್ತ್ರದ ಸೆರಗಲ್ಲಿ ಅಪಿಹಿತಂ=ಮರೆಸಿಡಲ್ಪಟ್ಟಿದ್ದ ಮಹಾರ್ಘಂ=ಬೆಲೆಯುಳ್ಳ ಚೂಡಾಮಣಿಂ=ಚೂಡಾಮಣಿ ಎನ್ನುವ ತಲೆಯಲ್ಲಿ ಧರಿಸುವ ಆಭರಣವನ್ನು ಕಪಿವರಸ್ಯ=ಕಪಿಶ್ರೇಷ್ಠನಾದ ಹನುಮಂತನ ಕರೇ=ಕೈಗಳಲ್ಲಿ ಸಾ=ಆ ಸೀತೆಯು ದದೌ=ಕೊಟ್ಟಳು.

"ನೀನು ಲಕ್ಷ್ಮಣನ ಸಂಗಡ ರಘುರಾಮನನ್ನು ಒಂದು ತಿಂಗಳೊಳಗೆ ಕರೆತರದೇ ಇದ್ದಲ್ಲಿ ನಾನು ಜೀವವನ್ನು ಬಿಡುತ್ತೇನೆ" ಎಂದು ಸಂದೇಶವನ್ನು ನೀಡಿ ತನ್ನ ವಸ್ತ್ರದ ಸೆರಗಿನಲ್ಲಿ ಮರೆಸಿಟ್ಟುಕೊಂಡಿದ್ದ ಅನರ್ಘ್ಯವಾದ ಚೂಡಾಮಣಿಯನ್ನು ಅವನಿಗೆ ನೀಡಿದಳು.

ಗದ್ಯ ॥ ಅಥಗಮನಾಯ ತದನುಮತಿಮವಾಪ್ಯ, ನಿಜಾ-
ಗಮನಮಸುರಾವನಿಜಾನೇಃ ಬುಬೋಧಯಿಷುಃ
ಅಶೋಕವನಿಕಾಮಭಾಂಕ್ಷೀತ್

ಅಥ=ಅನಂತರ ಗಮನಾಯ=ಹೋಗಲು ತದನುಮತಿಂ=ಸೀತೆಯ ಅನುಮತಿಯನ್ನು ಅವಾಪ್ಯ=ಹೊಂದಿ ನಿಜಾಗಮನಂ=ತನ್ನ ಆಗಮನವನ್ನು ಅಸುರಅವನಿಜಾನೇ=ರಾಕ್ಷಸ ರಾಜನಿಗೆ ಬುಬೋಧಯಿಷುಃ=ತಿಳಿಸಬೇಕೆಂದು ಅಶೋಕವನಿಕಾಂ=ಅಶೋಕವನವನ್ನೂ

ಅಧಾಂಕ್ಷೀತ್= ಧ್ವಂಸ ಮಾಡಿದನು.

ನಂತರ ಹೊರಡಲು ಸೀತೆಯಿಂದ ಅನುಮತಿಯನ್ನು ಪಡೆದು ತನ್ನ ಆಗಮನವನ್ನು ರಾಕ್ಷಸರಾಜ ರಾವಣನಿಗೆ ತಿಳಿಸಬೇಕೆಂದು ಅಶೋಕವನವನ್ನು ಹಾಳು ಮಾಡಿದನು.

ಗದ್ಯ ॥ ವಿದಿತೋದಂತಸ್ಯ ಪಟಪಟಾಯಿತ ದಂತಸ್ಯ
ದಶಕಂಧರಸ್ಯ ನಿದೇಶೇನ ಸಮಾಗತಾನಶೀತಿ ಸಹಸ್ರಾಣಿ
ಕಿಂಕರಾನ್ನಾಮ ರಾಕ್ಷಸಾನ್, ಪ್ರಹಸ್ತಸುತಂ ಜಂಬುಮಾಲಿನಂ,
ಪಂಚಸೇನಾಪತೀನ್, ರಾವಣಾತ್ಮಜಮಕ್ಷಂಚ ಪದ್ಭಿರ್ನಖೈಃ
ವಾಲೇನ ಪಾದಪೈರ್ಗಂಡೂಫಲೈಃ ತದಾನೀತೈರಾಯುಧೈಶ್ಚ
ಕ್ಷಣೇನ ನಿಹತ್ಯ ಸಂವರ್ತ ಸಮಯ ಸಮವರ್ತೀ ಇವ ಅವತಸ್ಥೆ ॥

ವಿದಿತೋದಂತಸ್ಯ=ಕೇಳಲ್ಪಟ್ಟ ವೃತ್ತಾಂತವುಳ್ಳ, ಪಟಪಟಾಯಿತ ದಂತಸ್ಯ=ಕಟಕಟನೆ ಕಡಿದ ಹಲ್ಲುಳ್ಳ ದಶಕಂಧರಸ್ಯ=ರಾವಣನ ನಿದೇಶೇನ=ಆಜ್ಞೆಯಿಂದ ಸಮಾಗತಾನ್=ಬಂದ ಕಿಂಕರಾನ್ನಾಮ=ಕಿಂಕರರೆಂಬ ಹೆಸರಿನ ಅಶೀತಿ ಸಹಸ್ರಾಣಿ=ಎಂಬತ್ತು ಸಾವಿರ ರಾಕ್ಷಸಾನ್=ರಾಕ್ಷಸರುಗಳನ್ನು ಪ್ರಹಸ್ತಸುತಂ=ಪ್ರಹಸ್ತನೆಂಬುವನ ಮಗನಾದ ಜಂಬುಮಾಲಿನಂ=ಜಂಬುಮಾಲಿ ಎನ್ನುವವನನ್ನೂ ಪಂಚಸೇನಾಪತೀನ್=ಐವರು ಸೇನಾಧಿಪತಿಗಳನ್ನೂ ರಾವಣಾತ್ಮಜಂ=ರಾವಣನಕುಮಾರನಾದ ಅಕ್ಷಂಚ=ಅಕ್ಷಯಕುಮಾರನನ್ನೂ ಸಹ ಪದ್ಭಿಃ=ಕಾಲುಗಳಿಂದಲೂ, ನಖೈಃ=ಉಗುರುಗಳಿಂದಲೂ ವಾಲೇನ=ಬಾಲದಿಂದಲೂ, ಪಾದಪೈಃ=ಮರಗಳಿಂದಲೂ ಗಂಡೂಫಲೈಃ=ಗುಂಡುಕಲ್ಲುಗಳಿಂದಲೂ ತದಾನೀತೈಃ=ಅವರಿಂದ ತರಲ್ಪಟ್ಟ ಆಯುಧೈಶ್ಚ=ಆಯುಧಗಳಿಂದಲೂ ಸಹ ಕ್ಷಣೇನ=ಕ್ಷಣಮಾತ್ರದಲ್ಲಿ ನಿಹತ್ಯ=ಕೊಂದು ಹಾಕಿ ಸಂವರ್ತ ಸಮಯ ಸಮವರ್ತಿ ಇವ=ಪ್ರಳಯಕಾಲದ ಯಮನೋ ಎನ್ನುವಂತೆ ಅವತಸ್ಥೆ=ಇದ್ದನು.

ಈ ವೃತ್ತಾಂತವನ್ನು ಕೇಳಿ ಕಟಕಟನೆ ಹಲ್ಲು ಕಡಿದು ರಾವಣನ ಆಜ್ಞೆಯಿಂದ ಬಂದ ಕಿಂಕರರೆಂಬ ಎಂಬತ್ತು ಸಾವಿರ ರಾಕ್ಷಸರನ್ನೂ, ಪ್ರಹಸ್ತನ ಮಗ ಜಂಬುಮಾಲಿ, ಐದು ಸೇನಾಪತಿಗಳು ಮತ್ತು ರಾವಣಕುಮಾರ ಅಕ್ಷಯನನ್ನೂ ಸಹ ಹನುಮಂತನು ಕಾಲು, ಉಗುರು, ಬಾಲ, ಮರ ಮತ್ತು ಗುಂಡುಕಲ್ಲು ಮತ್ತು ಅವರಿಂದಲೇ ತರಲ್ಪಟ್ಟ ಆಯುಧಗಳಿಂದಲೂ ಸಹ ಕ್ಷಣಮಾತ್ರದಲ್ಲಿ ಅವರನ್ನು ಕೊಂದುಹಾಕಿ ಪ್ರಳಯಕಾಲದ ಯಮನಂತೆ ಇದ್ದನು.

ಅಥೇಂದ್ರ ಜೇತ್ರಾ ದ್ರುಹಿಣಾಸ್ತ್ರ ಬದ್ಧೋ
ವಿಮೋಚಿತೋ ಭೂಚ್ಚಣರಜ್ಜು ಬಂಧೈಃ
ತಥಾಪಿ ಕಾರ್ಯಾಯ ನಿಬದ್ಧವತ್ಕಪಿಃ
ಸಭಾಮಗಾದಾಶರನಾಯಕಸ್ಯ ॥೧೧॥

ಅಥ=ಅನಂತರ ಇಂದ್ರಜೇತ್ರಾ=ಇಂದ್ರನನ್ನು ಜಯಿಸಿದಂತಹ ಇಂದ್ರಜಿತು ಎನ್ನುವ ರಾವಣಕುಮಾರನಿಂದ ದ್ರುಹಿಣಾಸ್ತ್ರಬದ್ಧಃ=ಬ್ರಹ್ಮಾಸ್ತ್ರದಿಂದ ಕಟ್ಟಲ್ಪಟ್ಟ ಹನುಮಂತನು ಶಣರಜ್ಜುಬಂಧೈಃ=ಸೆಣಬಿನ ಹಗ್ಗದ ಕಟ್ಟುಗಳಿಂದ ವಿಮೋಚಿತಃ=ವಿಮೋಚನೆಗೊಂಡವನು

ಅಭೂತ್=ಆದನು. ತಥಾಪಿ=ಹಾಗಿದ್ದರೂ ಕೂಡ ಕಪಿಃ=ಆ ಹನುಮಂತನು ಕಾರ್ಯಾಯ=ಮುಂದೆ ಆಗಬೇಕಾದ ಕಾರ್ಯಗಳಿಗೋಸ್ಕರ ನಿಬದ್ಧವತ್=ಕಟ್ಟಲ್ಪಟ್ಟವನಂತೆ ಅಸುರನಾಯಕಸ್ಯ=ರಾಕ್ಷಸ ರಾಜ ರಾವಣನ ಸಭಾಂಪ್ರತಿ=ಸಭೆಯನ್ನು ಕುರಿತು ಅಗಾತ್=ಹೋದನು.

ಅನಂತರ ಇಂದ್ರನನ್ನು ಜಯಿಸಿದ ಇಂದ್ರಜಿತು ಎಂಬ ಹೆಸರನ್ನು ಹೊಂದಿದ ರಾವಣಕುಮಾರನಿಂದ ಬ್ರಹ್ಮಾಸ್ತ್ರದಿಂದ ಕಟ್ಟಲ್ಪಟ್ಟ ಹನುಮಂತನು ಸೆಣಬಿನ ಹಗ್ಗದ ಕಟ್ಟುಗಳಿಂದ ವಿಮೋಚನೆಗೊಂಡನು. ಆದರೂ ಕೂಡ ಮುಂದೆ ಆಗಬೇಕಾದ ಕೆಲಸಗಳಿಗೋಸ್ಕರವಾಗಿ ಕಟ್ಟಲ್ಪಟ್ಟವನಂತಿದ್ದು ರಾಕ್ಷಸ ರಾಜನಾದ ರಾವಣನ ಸಭೆಗೆ ಹೋದನು.

ತತ್ರ ರಾಕ್ಷಸ ಶಾರ್ದೂಲೈಃ ಸೇವಿತಸ್ಯಾ ಸುರೇಶಿತುಃ
ಸಿಂಹಾಸನಾದುಚ್ಚತರೇ ವಾಲಸಿಂಹಾಸನೇ ಸ್ಥಿತಃ ॥೧೨॥

ತತ್ರ=ಅಲ್ಲಿ ರಾಕ್ಷಸ ಶಾರ್ದೂಲೈಃ=ರಾಕ್ಷಸ ಸಿಂಹ ಸದೃಶವೀರರಿಂದ ಸೇವಿತಸ್ಯ=ಸೇವೆಗೊಳ್ಳುತ್ತಿದ್ದ ಅಸುರೇಶಿತುಃ=ರಾಕ್ಷಸ ರಾಜ ರಾವಣನ ಸಿಂಹಾಸನಾತ್=ಸಿಂಹಾಸನಕ್ಕಿಂತ ಉಚ್ಚತರೇ=ಎತ್ತರವಾದ ವಾಲಸಿಂಹಾಸನೇ=ಬಾಲದ ಸಿಂಹಾಸನದ ಮೇಲೆ ಸ್ಥಿತಃ=ಕುಳಿತನು.

ಅಲ್ಲಿ ರಾಕ್ಷಸ ಸಿಂಹರಿಂದ ಸೇವಿಸಲ್ಪಡುತ್ತಿದ್ದ ಅಸುರ ರಾಜ ರಾವಣನ ಸಿಂಹಾಸನಕ್ಕಿಂತ ಎತ್ತರವಾದ (ತನ್ನ) ಬಾಲದಿಂದ ರಚಿಸಲ್ಪಟ್ಟ ಸಿಂಹಾಸನದ ಮೇಲೆ ಕುಳಿತನು.

ಕಸ್ತ್ವಂ ಕುತಸ್ತ್ಯಃ ಕುತ್ರತ್ಯಃ ಕಿಮುದ್ದಿಶ್ಯ ಸಮಾಗತಃ
ಇತಿ ದೈತೇಯ ಪತಿನಾ ಪೃಷ್ಟಃ ಪಾವನಿರಬ್ರವೀತ್ ॥೧೩॥

ಪಾವನಿಃ=ಪವನಸುತನಾದ ಹನುಮಂತನು ದೈತೇಯಪತಿನಾ=ರಾಕ್ಷಸರ ಯಜಮಾನನಾದ ರಾವಣನಿಂದ ತ್ವಂ ಕಃ=ನೀನು ಯಾರು, ಕುತಸ್ತ್ಯಃ=ಎಲ್ಲಿಂದ ಬಂದವನು, ಕುತ್ರತ್ಯಃ=ಎಲ್ಲಿರುವವನು ಕಿಮುದ್ದಿಶ್ಯ=ಯಾವ ಉದ್ದೇಶದಿಂದ ಸಮಾಗತಃ=ಬಂದಿರುವವನು ಇತಿ = ಎಂಬುದಾಗಿ ಪೃಷ್ಟಃ ಸನ್=ಕೇಳಲ್ಪಟ್ಟವನಾಗಿ ಅಬ್ರವೀತ್=(ಹೀಗೆ) ಹೇಳಿದನು.

ಪವನತನಯನಾದ ಹನುಮಂತನು ರಾಕ್ಷಸರ ಯಜಮಾನನಾದ ರಾವಣನಿಂದ "ನೀನು ಯಾರು? ಎಲ್ಲಿಂದ ಬಂದವನು? ಎಲ್ಲಿರುವವನು? ಯಾವ ಉದ್ದೇಶದಿಂದ ಬಂದವನು?" ಎಂಬುದಾಗಿ ಕೇಳಲ್ಪಟ್ಟು, ಅದಕ್ಕೆ ಉತ್ತರ ರೂಪವಾಗಿ ಹೀಗೆ ಹೇಳಿದನು.

ಗದ್ಯ ॥ ಅಸ್ತಿ ಕಶ್ಚಿನ ರಾಮೋನಾಮ ದೈತೇಯ ನಿಬರ್ಹಣೇ, ಪ್ರಾಚೀನ ಬರ್ಹಿಷಃ
ಸಹಾಯಸ್ಯ, ದಶರಥಸ್ಯ ಜಠರಾತ್, ನಿಖಿಲನಿಶಾಚರ ನಿವಾರಣಾಯ
ಧರಣ್ಯಾಮವತೀರ್ಣಃ ಕಾಟಕಾಟವಿದವ್ಯಹೀಟಯೋನಿಃ, ಸುಬಾಹು ಮಾರೀಚ
ಪ್ರಮುಖ ಪಲಾಶನ ಜಾಲತೂಲ ವಾತೂಲಃ, ಸಾಪರಾಧವಿರಾಧವಧವಿಧಾಯೀ,
ಮಂದೇತರ ಕಂದರ್ಪ ದರ್ಪ ಶೂರ್ಪಣಖಾ ಮುಖವಿಕಾರಕಾರೀ, ಖರದೂಷಣ
ಪ್ರಮುಖ ರಕ್ಷೋಗಣ ಕಕ್ಷಾಕೃಶಾನುಃ, ಕಾಮಾಂಧ ಕಬಂಧ ಬಂಧ ವಿಮೋಚನಸ್ಯ ॥

ದೈತೇಯ ನಿಬರ್ಹಣೇ=ರಾಕ್ಷಸರನ್ನು ನಾಶ ಮಾಡುವುದರಲ್ಲಿ, ಪ್ರಾಚೀನ ಬರ್ಹಿಷಃ=ಇಂದ್ರನಿಗೆ ಸಹಾಯಸ್ಯ=ನೆರವಾಗಿದ್ದ ದಶರಥಸ್ಯ=ದಶರಥ ಮಹಾರಾಜನ ಜಠರಾತ್=

ಉದರದಿಂದ ನಿಖಿಲನಿಶಾಚರನಿವಾರಣಾಯ=ಸಮಸ್ತ ರಾಕ್ಷಸರನ್ನೂ ನಿವಾರಿಸಲೆಂಬುದಾಗಿ ಧರಣ್ಯಾಂ=ಭೂಮಿಯಲ್ಲಿ ಅವತೀರ್ಣಃ=ಅವತರಿಸಿ ತಾಟಕಾಟವೀದವಕೃಪೀಟಯೋನಿಃ=ತಾಟಕಿ ಎನ್ನುವ ಕಾಡಿಗೆ ದಾವಾನಲದಂತೆ ಇರುವವನೂ ಸುಬಾಹು ಮಾರೀಚಪ್ರಮುಖ ಪಲಾಶವ ಜಾಲತೂಲ ವಾತೂಲಃ=ಸುಬಾಹು ಮಾರೀಚ ಮುಂತಾದ ರಾಕ್ಷಸರ ಗುಂಪು ಎನ್ನುವ ಹತ್ತಿಗೆ ಬಿರುಗಾಳಿಯಂತಿರುವವನೂ, ಸಾಪರಾಧ ವಿರಾಧ ವಧ ವಿಧಾಯೀ=ಅಪರಾಧದಿಂದ ಕೂಡಿದ ವಿರಾಧನೆಂಬ ರಾಕ್ಷಸನ ವಧೆಯನ್ನು ಮಾಡಿದವನೂ, ಮಂದೇತರ ಕಂದರ್ಪ ದರ್ಪ ಶೂರ್ಪನಖಿ ಮುಖವಿಕಾರಕಾರೀ=ಬಹಳವಾದ ಮನ್ಮಥನ ಅಟ್ಟಹಾಸದಿಂದ ಮದಿಸಿದ ಶೂರ್ಪನಖಿಯ ಮುಖವನ್ನು ವಿಕಾರವನ್ನಾಗಿ ಮಾಡಿದವನೂ, ಖರದೂಷಣ ಪ್ರಮುಖ ರಕ್ಷೋಗಣಕಕ್ಷ್ಯಾಪಶುಶುಕ್ಷಣಿಃ=ಖರ, ದೂಷಣ ಮುಂತಾದ ರಾಕ್ಷಸ ಸಮುದಾಯವೆನ್ನುವ ಹುಲ್ಲು ಬೊಂಬೆಗಳ ವಿಷಯದಲ್ಲಿ ಬೆಂಕಿಯಂತೆ ಇರುವವನೂ, ಶಾಪಾಂಧ ಕಬಂಧ ಬಂಧ ವಿಮೋಚನಶ್ಚ=ಶಾಪದಿಂದ ಮೂಢನಾದ ಕಬಂಧನ ಶಾಪಬಂಧನವನ್ನು ವಿಮೋಚನೆ ಮಾಡಿದವನೂ ಆದ ರಾಮೋನಾಮ=ರಾಮನೆಂಬುವ ಹೆಸರುಳ್ಳ ಕಶ್ಚಿನ=ಒಬ್ಬ ಪುರುಷನು ಅಸ್ತಿ=ಇದ್ದಾನೆ.

"ರಾಕ್ಷಸರನ್ನು ನಿರ್ಮೂಲ ಮಾಡುವುದರಲ್ಲಿ ಇಂದ್ರನಿಗೆ ನೆರವಾದ ದಶರಥ ಮಹಾರಾಜನ ಹೊಟ್ಟೆಯಲ್ಲಿ, ಸಕಲ ರಾಕ್ಷಸರನ್ನೂ ನಿಗ್ರಹಿಸಲೆಂಬುದಾಗಿ ಭೂಮಿಯಲ್ಲಿ ಅವತಾರವೆತ್ತಿ ತಾಟಕಿ ಎನ್ನುವ ಕಾಡಿಗೆ ದಾವಾನಲನೂ, ಸುಬಾಹು, ಮಾರೀಚ ಮುಂತಾದ ರಾಕ್ಷಸ ಸಮುದಾಯವೆಂಬ ಹತ್ತಿಗೆ ಬಿರುಗಾಳಿ ಸದೃಶನೂ, ಅಪರಾಧಿ ವಿರಾಧನನ್ನು ವಧಿಸಿದವನೂ ಮನ್ಮಥನ ಬಲದಿಂದ ಬಹಳ ಅಟ್ಟಹಾಸ ಮಾಡುತ್ತಿದ್ದ ಶೂರ್ಪನಖಿಯ ಮುಖವನ್ನು ವಿಕಾರ ಮಾಡಿದವನೂ, ಖರದೂಷಣ ಮುಂತಾದವರೆಂಬ ಹುಲ್ಲು ಬೊಂಬೆಗಳಿಗೆ ಬೆಂಕಿಯಂತೆ ಇರುವವನೂ, ಶಾಪದಿಂದ ಮೂಢನಾದ ಕಬಂಧನ ಶಾಪವಿಮೋಚನೆ ಮಾಡಿದವನೂ ಆದ ರಾಮನೆಂಬ ಹೆಸರುಳ್ಳ ಒಬ್ಬನಿದ್ದಾನೆ."

ಗದ್ಯ ॥ ಕಿಂಚಸ್ಮರಸಿಖಿಲ ಧನುರ್ಗುಣ ನಿಷ್ಪಂದೀಕೃತ ವಿಂಶತಿ ಭುಜಂ,
ವಿನಿಶ್ವಸದ್ವದನ ಪರಂಪರಂ, ಭವಂತಮಪರಿಮೇಯವೀರ್ಯಾರ್ಜುನಃ
ಕಾರ್ತವೀರ್ಯಾರ್ಜುನಃ ಕಾರಾಗಾರೇ ಸ್ಥಾಪಯಿಷ್ಯತೀತಿ ॥

ಕಿಂಚ=ಮತ್ತೂ ಧನುರ್ಗುಣ=ಬಿಲ್ಲಿನ ನಾಣಿನ ಹಗ್ಗದಲ್ಲಿ ನಿಷ್ಪಂದೀಕೃತ=ಚಲಿಸಲಾಗದಂತೆ ಮಾಡಲ್ಪಟ್ಟ ವಿಂಶತಿಭುಜಂ=ಇಪ್ಪತ್ತು ಭುಜಗಳಿಂದ ಕೂಡಿ ವಿನಿಶ್ವಸನ್=ಏದುಸಿರು ಬಿಡುತ್ತಿದ್ದ ವದನ ಪರಂಪರಂ=ಮುಖಗಳ ಸಾಲಿನಿಂದ ಕೂಡಿದ ಭವಂತಂ=ನಿನ್ನನ್ನು ಅಪರಿಮೇಯ=ಅಳೆಯಲಾರದಷ್ಟು ವೀರ್ಯಾರ್ಜುನ=ಪರಾಕ್ರಮವನ್ನು ಗಳಿಸಿದ ಕಾರ್ತವೀರ್ಯಾರ್ಜುನಃ=ಕಾರ್ತವೀರ್ಯಾರ್ಜುನನು ಕಾರಾಗಾರೇ=ಕಾರಾಗೃಹದಲ್ಲಿ ಅಸ್ಥಾಪಯಿಷ್ಯತ್=ಇಟ್ಟನು ಇತಿ=ಎಂಬುವುದನ್ನು ಸ್ಮರಸಿಕಿಲ=ಜ್ಞಾಪಕ ಇಟ್ಟಿರುವೆಯಷ್ಟೇ.

"ಮತ್ತೂ ಬಿಲ್ಲಿನ ನಾಣಿನ ಹಗ್ಗದಲ್ಲಿ ಚಲಿಸಲಾಗದಂತೆ ಮಾಡಲ್ಪಟ್ಟ ಇಪ್ಪತ್ತು ತೋಳುಗಳನ್ನುಳ್ಳ, ಏದುಸಿರುಬಿಡುತ್ತಿದ್ದ ಮುಖಗಳಿಂದ ಕೂಡಿದ ನಿನ್ನನ್ನು ಅಪರಿಮಿತ ಪರಾಕ್ರಮವನ್ನು ಹೊಂದಿದ್ದ ಕಾರ್ತವೀರ್ಯಾರ್ಜುನನು ಕಾರಾಗೃಹದಲ್ಲಿಟ್ಟಿದ್ದ ವಿಚಾರವನ್ನು

ಜ್ಞಾಪಕದಲ್ಲಿ ಇಟ್ಟಿರುವೆಯಷ್ಟೆ?"

ಗದ್ಯ ॥ ತಮಪಿ ವಿಜಿತವತಃ ಪರಶುಧಾರಯಾಕ್ಷಿತಿಂ
ಅಕ್ಷತ್ರಿಯಾಮೇಕವಿಂಶತಿ ಕೃತ್ವಃ ಕೃತವತೋ
ಜಾಮದಗ್ನ್ಯಸ್ಯ ಗರ್ವದಹನ ನಿರ್ವಾಪಯಿತಾಯಂ ॥

ಅಯಂ=ಈ ರಾಮನು ತಂ ಅಪಿ=ಆ ಕಾರ್ತ್ತವೀರ್ಯ್ಯಾರ್ಜುನನನ್ನೂ ವಿಜಿತವತಃ=ಜಯಿಸಿದ ಪರಶುಧಾರಯಾ=ಕೊಡಲಿಯ ಅಂಚಿನಿಂದ ಕ್ಷಿತಿಂ=ಭೂಮಿಯನ್ನು ಏಕವಿಂಶತಿ ಕೃತ್ವಃ=ಇಪ್ಪತ್ತೊಂದು ಸಲ ಸುತ್ತಿ ಅಕ್ಷತ್ರಿಯಾಂ ಕೃತವತಃ=ಕ್ಷತ್ರಿಯರಿಲ್ಲದಂತೆ ಮಾಡಿದ ಜಾಮದಗ್ನ್ಯಸ್ಯ=ಜಮದಗ್ನಿಕುಮಾರ ಪರಶುರಾಮನ ಗರ್ವದಹನ=ಜಂಭವೆನ್ನುವ ಬೆಂಕಿಯನ್ನು ನಿರ್ವಾಪಯಿತಾ=ಆರಿಸಿದವನು.

"ಈ ರಾಮನಾದರೋ ಆ ಕಾರ್ತ್ತವೀರ್ಯ್ಯಾರ್ಜುನನನ್ನೂ ಜಯಿಸಿದ ಕೊಡಲಿಯ ತುದಿಯಿಂದ, ಭೂಮಿಯನ್ನು ಇಪ್ಪತ್ತೊಂದು ಬಾರಿ ಸುತ್ತಿ ಕ್ಷತ್ರಿಯರಿಲ್ಲದಂತೆ ಮಾಡಿದ, ಜಮದಗ್ನಿ ಕುಮಾರ ಪರಶುರಾಮನ ಜಂಭವೆನ್ನುವ ಬೆಂಕಿಯನ್ನು ಆರಿಸಿದವನು (ತಿಳಿಯಿತೆ)?"

ಗದ್ಯ ॥ ಅಪಿಚಸ್ಮರ್ಯ್ಯತೇ ಕಿಂ ಅಖಿಲ ಲೋಕಾಭಿನಂದನೀಯ
ಬಾಹುಬಲಶಾಲೀ ವಾಲೀ ಸ್ವಜಿಘೃಕ್ಷಯೋಪೇತ್ಯ ಪೃಷ್ಠತಃ ಸಮಾಶ್ಲಿಷ್ಟವಂತಂ,
ಭವಂತಂ ಅಜಾನಾನ ಇವ ವಾಲಧಿನಾ ತವಶಿರಃ, ಕರಪಾದಂ ನಿಶ್ಚಲಂ ನಿರ್ಬಧ್ಯ,
ನಿತ್ಯಕೃತ್ಯಾನುಷ್ಠಾನ ವಶಾಚ್ಚತುರರ್ಣವಾರ್ಣಸಿ ನಿಮಜ್ಜ್ಯ ಸಮಾಗಚ್ಛನ್
ಕಿಷ್ಕಿಂಧಾಂ, ಕಿಮಯಂ ಮಹಾರಾಜಸ್ಯ ವಾಲಧೌ ಜಲನಿಧಿನಿ ಮಜ್ಜನ ಸಮಯ
ಸಂಲಗ್ನೋ ಜಲೂಕಾ ವಿಶೇಷ ಇತಿ ಸವಿನಯಂ ವಿಜ್ಞಾಪಯದ್ಭಿಃ ವಾನರವರ್ಯೈಃ
ಪ್ರತಿಬೋಧಿತೋ ಗುಣಾಧಾವಂಧುತವ್ವಾನಿತಿ ॥

ಅಪಿಚ=ಮತ್ತೆ ಅಖಿಲಲೋಕ=ಎಲ್ಲ ಲೋಕಗಳಲ್ಲಿಯೂ ಅಭಿನಂದನೀಯ=ಕೊಂಡಾಡತಕ್ಕಂತಹ ಬಾಹುಬಲಶಾಲೀ=ಭುಜ ಬಲ ಪರಾಕ್ರಮಿ ಎನಿಸುವ ವಾಲೀ=ವಾಲಿಯು ಸ್ವಜಿಘೃಕ್ಷಯಾ=ತನ್ನನ್ನು ಹಿಡಿಯಬೇಕೆಂದು ಇಚ್ಛಿಸಿ ಉಪೇತ್ಯ=ಬಂದು ಪೃಷ್ಠತಃ=ಹಿಂಭಾಗದಿಂದ ಸಮಾಶ್ಲಿಷ್ಟವಂತಂ=ಆಲಂಗಿಸಿಕೊಂಡ ಭವಂತಂ=ನಿನ್ನನ್ನು ಅಜಾನಾನಃಇವ=ತಿಳಿಯದೇ ಇರುವಂತೆಯೇ ವಾಲಧಿನಾ=ಬಾಲದ ತುದಿಯಿಂದ ತವಶಿರಃ=ನಿನ್ನ ತಲೆ ಕರಪಾದಂ=ಕೈ ಮತ್ತು ಕಾಲುಗಳನ್ನು ನಿಶ್ಚಲಂ=ಚಲಿಸಲಾಗದಂತೆ ನಿರ್ಬಧ್ಯ=ಕಟ್ಟಿ ಹಾಕಿ ನಿತ್ಯಕೃತ್ಯ ಅನುಷ್ಠಾನವಶಾತ್=ನಿತ್ಯವೂ ಮಾಡಬೇಕಾದ ಅನುಷ್ಠಾನಕ್ಕಾಗಿ ಚತುರರ್ಣವ=ನಾಲ್ಕು ಸಮುದ್ರಗಳ ಅರ್ಣಸಿ=ನೀರಿನಲ್ಲಿ ನಿಮಜ್ಜ್ಯ=ಸ್ನಾನ ಮಾಡಿ ಕಿಷ್ಕಿಂಧಾಂ=ಕಿಷ್ಕಿಂಧಾಪಟ್ಟಣಕ್ಕೆ ಸಮಾಗಚ್ಛನ್=ಬರುತ್ತ ಮಹಾರಾಜಸ್ಯ=ಮಹಾರಾಜನ ವಾಲಧೌ=ಬಾಲದ ತುದಿಯಲ್ಲಿ ಜಲನಿಧಿ=ಸಮುದ್ರದಲ್ಲಿ ನಿಮಜ್ಜನಸಮಯೇ=ಸ್ನಾನ ಮಾಡುವ ಸಮಯದಲ್ಲಿ ಸಂಲಗ್ನಃ=ಅಂಟಿಕೊಂಡಿರುವ ಜಲೂಕಾವಿಶೇಷಃ ಅಯಂ ಇತಿ=ಒಂದು ವಿಧವಾದ ಜಲಚರವೋ ಎಂಬುದಾಗಿ ಸವಿನಯಂ=ಬಹುವಿನಯದಿಂದ ವಿಜ್ಞಾಪಯದ್ಭಿಃ=ಹೇಳಿದ (ಬಿನ್ನವಿಸಿದ) ವಾನರವರ್ಯೈಃ=ವಾನರಶ್ರೇಷ್ಠರಿಂದ ಪ್ರತಿಬೋಧಿತಃಸನ್=ಜ್ಞಾಪಿಸಿಕೊಂಡು ಗುಣಧಾವ್ನೈಃ

=ಜಂತುವನ್ನು ಕೊಡಹುವಂತೆ (ನಿನ್ನನ್ನು) ಧುತವಾನ್=ಒದರಿದನು ಇತಿ=ಎಂಬುದನ್ನು ವ್ಯಸ್ಮಾರ್ಷೀಃ ಕಿಂ=ಮರೆತುಬಿಟ್ಟಿರುವೆಯೇನು.

“ಮತ್ತೆ ಸಕಲ ಲೋಕಗಳಲ್ಲಿಯೂ ಕೊಂಡಾಡಲ್ಪಡುವ ಭುಜಬಲ ಪರಾಕ್ರಮಶಾಲಿ ಎನಿಸುವ ವಾಲಿಯು, ತನ್ನನ್ನು ಹಿಡಿಯಬೇಕೆಂದು ಬಂದು ಹಿಂದಿನಿಂದ ಆಲಂಗಿಸಿಕೊಂಡ ನಿನ್ನನ್ನು, ನಿನಗೆ ತಿಳಿಯದಂತೆಯೇ ಬಾಲದ ತುದಿಯಿಂದ ತಲೆ, ಕೈ, ಕಾಲುಗಳನ್ನು ಅಲ್ಲಾಡದಂತೆ ಕಟ್ಟಿಹಾಕಿ ನಿತ್ಯಾನುಷ್ಠಾನಕ್ಕಾಗಿ ನಾಲ್ಕು ಸಮುದ್ರದ ನೀರಿನಲ್ಲೂ ಸ್ನಾನ ಮಾಡಿ ಕಿಷ್ಕಿಂಧಾ ಪಟ್ಟಣಕ್ಕೆ ಹಿಂತಿರುಗಲು “ಮಹಾರಾಜರ ಬಾಲದ ತುದಿಯಲ್ಲಿ ಸಮುದ್ರದಲ್ಲಿ ಸ್ನಾನ ಮಾಡುವಾಗ ಅಂಟಿಕೊಂಡಿರುವ ಒಂದು ವಿಧವಾದ ಜಲಚರವೋ?” ಎಂಬುದಾಗಿ ವಾನರವರರು ಬಹು ವಿನಯದಿಂದ ವಿಜ್ಞಾಪಿಸಿಕೊಳ್ಳಲು ಜ್ಞಾಪಿಸಿಕೊಂಡವನಂತೆ ನಿನ್ನನ್ನು ಜಂತುವೊಂದನ್ನು ಕೊಡಹುವಂತೆ ಒದರಿದನು. ಇದನ್ನು ನೀನು ಮರೆತುಬಿಟ್ಟಿರುವೆಯೇನು?”

ಗದ್ಯ ॥ ತಮಪಿ ಪ್ರಿಯ ಸುಹೃದಃ ಸುಗ್ರೀವಸ್ಯ ಪ್ರಿಯತಮಾಪಹರಣ
ಕೋಪೇನ ಏಕೇ ನೈವರೋಪೇಣ ಕೃತಾಂತ ನಿಶಾಂತಾ
ತಿಥೀಕೃತ ವಾನಯಂ ॥

ಅಯಂ=ಈ ರಾಮನು ತಂ ಅಪಿ=ಅಂತಹ ವಾಲಿಯನ್ನು ಸಹ ಪ್ರಿಯಸುಹೃದಃ=ಪ್ರೀತಿಯ ಗೆಳೆಯನಾದ ಸುಗ್ರೀವಸ್ಯ=ಸುಗ್ರೀವನ ಪ್ರಿಯತಮಾಪಹರಣ=ಹೆಂಡತಿಯ ಅಪಹರಣದಿಂದ ಉಂಟಾದ ಕೋಪೇನ=ಕೋಪದಿಂದ ಏಕೇನೈವರೋಪೇಣ(ಬಾಣೇನ)=ಒಂದೇ ಬಾಣದಿಂದ ಕೃತಾಂತ=ಯಮನ ನಿಶಾಂತ=ಮನೆಗೆ ಅತಿಥೀಕೃತವಾನ್=ಅತಿಥಿಯನ್ನಾಗಿ ಮಾಡಿದನು.

“ಈ ರಾಮನು ಅಂತಹ ವಾಲಿಯನ್ನೂ ಕೂಡ ಪ್ರೀತಿಯ ಗೆಳೆಯನಾದ ಸುಗ್ರೀವನ ಹೆಂಡತಿಯ ಅಪಹರಣದಿಂದ ಉಂಟಾದ ಕೋಪದಿಂದ ಒಂದೇ ಬಾಣದಿಂದ ಯಮನ ಮನೆಗೆ ಅತಿಥಿಯನ್ನಾಗಿ ಮಾಡಿದನು.”

ಗದ್ಯ ॥ ಏವಂ ವಿಧಃ ಸ ಪುರುಷೋತ್ತಮಃ ಲಂಕಾಂ ಇಮಾಂ
ಭಸ್ಮಸಾತ್ಕರ್ತುಂ ಆಜ್ಞಾಮಾತ್ರಂ ಪ್ರತೀಕ್ಷಮಾಣೇನ, ಲಕ್ಷ್ಮಣೇನ
ಸುಹೃದಾಚಸುಗ್ರೀವೇಣ, ಮದನ್ಯತರವಾನರವರ ಕೋಟಿ
ಭಿರುಪಾಸ್ಯಮಾನೇನ ಸಹಮಹಾಸ್ತ್ರಂ, ಮಾಲ್ಯವಂತಂ,
ಸಾನುಮಂತಂ, ಸುರಾಲಯಂ ಸುರಾಧಿಪ ಇವಾಧಿವಸತಿ ॥

ಏವಂವಿಧಃ=ಇಂತಹ ಪರಾಕ್ರಮದಿಂದ ಕೂಡಿದ ಸಃಪುರುಷೋತ್ತಮಃ=ಆ ಪುರುಷ ಶ್ರೇಷ್ಠ ಶ್ರೀರಾಮನು ಇಮಾಂ=ಈ ಲಂಕಾಂ=ಲಂಕಾಪಟ್ಟಣವನ್ನು ಭಸ್ಮಸಾತ್ಕರ್ತುಂ=ಭಸ್ಮೀಭೂತವನ್ನಾಗಿ ಮಾಡಲು ಆಜ್ಞಾಮಾತ್ರಂ=ಕೇವಲ ಆಜ್ಞೆಯನ್ನು ಪ್ರತೀಕ್ಷಮಾಣೇನ=ನಿರೀಕ್ಷಿಸುತ್ತಿರುವ ಲಕ್ಷ್ಮಣೇನ ಸಹ=ಲಕ್ಷ್ಮಣನಿಂದ ಕೂಡಿ ಮದನ್ಯತರ=ನನ್ನಂತೆಯೇ ಇರುವ ವಾನರವರಕೋಟಿಭಿಃ=ಕೋಟಿ ಸಂಖ್ಯೆಯಲ್ಲಿ ಇರುವ ವಾನರ ಶ್ರೇಷ್ಠರುಗಳಿಂದ ಉಪಾಸ್ಯಮಾನೇನ=ಸೇವಿಸಲ್ಪಟ್ಟಂತಹ ಸುಹೃದಾ=ಸ್ನೇಹಿತನಾದ ಸುಗ್ರೀವೇಣಚಸಹ=

ಸುಗ್ರೀವನಿಂದಲೂ ಕೂಡಿ ಮಹಾಂತಂ=ದೊಡ್ಡದಾದ ಮಾಲ್ಯವಂತಂ=ಮಾಲ್ಯವಂತ ಎನ್ನುವ ಹೆಸರಿನ ಸಾನುಮಂತಂ=ಪರ್ವತವನ್ನು ಸುರಾಧಿಪ=ದೇವೇಂದ್ರನು ಸುರಾಲಯಂ ಇವ=ದೇವಲೋಕವನ್ನೆಂಬುವಂತೆ ಅಧಿವಸತಿ=ವಾಸಿಸುತ್ತಿದ್ದಾನೆ.

"ಇಂತಹ ಪರಾಕ್ರಮಶಾಲಿಯಾದ ಆ ಪುರುಷಶ್ರೇಷ್ಠ ಶ್ರೀರಾಮನು ಈ ಲಂಕಾಪಟ್ಟಣವನ್ನು ಭಸ್ಮೀಭೂತವನ್ನಾಗಿ ಮಾಡಲು ಕೇವಲ ಆಜ್ಞೆ ನೀಡುವುದನ್ನೇ ನಿರೀಕ್ಷಿಸುತ್ತಾ ಕಾದಿರುವ ಲಕ್ಷ್ಮಣನಿಂದ ಒಡಗೂಡಿ ನನ್ನಂತೆಯೇ ಇರುವ ಕೋಟಿ ಸಂಖ್ಯೆಯ ವಾನರ ಶ್ರೇಷ್ಠರುಗಳಿಂದ ಸೇವಿಸಲ್ಪಡುತ್ತಿರುವ ಸ್ನೇಹಿತ ಸುಗ್ರೀವನ ಜೊತೆಯಲ್ಲಿ ಹಿರಿದಾದ ಮಾಲ್ಯವಂತ ಪರ್ವತದಲ್ಲಿ ದೇವೇಂದ್ರನು ದೇವಲೋಕವನ್ನೆಂಬುವಂತೆ ವಾಸ ಮಾಡುತ್ತಿದ್ದಾನೆ."

ಗದ್ಯ ॥ ಪುರುಷಾಧಮಸ್ತು ಭವಾನ್ ಪಂಚಾನನಯೋಃಪುರತಃ
ಸ್ಥಾತುಂ ಅಶಕ್ತೋ ಜಂಬುಕ ಇವ ಬಹಿರ್ಗತ ತಯೋರ್ಮನುಜಸಿಂಹಯೋಃ
ಪರಿಗೃಹೀತ ಪರಿವ್ರಾಜಕಭೂಮಿಕಃ ಪ್ರವಿಶ್ಯ ಪರ್ಣಶಾಲಾಂ ಅನಘಾಂ
ಜನಕ ನಂದಿನೀಂ ಅಚೋಚುರತ್ಕಿಲ ॥

ಪುರುಷಾಧಮಃ=ಪುರುಷರೊಳಗೆ ಅಧಮನಾದ ಭವಾಂಸ್ತು=ನೀನಾದರೋ ಪಂಚಾನನಯೋಃ=ಸಿಂಹಗಳೆರಡರ ಪುರತಃ=ಎದುರಿಗೆ ಸ್ಥಾತುಂ=ನಿಲ್ಲಲು ಅಶಕ್ತೋಃ=ಬಲವಿಲ್ಲದ ಜಂಬುಕ ಇವ=ನರಿಯೋ ಎಂಬಂತೆ ಮನುಜಸಿಂಹಯೋಃ=ಪುರುಷ ಸಿಂಹರುಗಳಾದ ರಾಮಲಕ್ಷ್ಮಣರು ಬಹಿರ್ಗತಯೋಃಸತ್ಯೋಃ=ಹೊರಗಡೆ ಹೋಗಿರಲು ಪರಿಗೃಹೀತಃ=ಪರಿಗ್ರಹಣ ಮಾಡಿದಂತಹ ಪರಿವ್ರಾಜಕ ಭೂಮಿಕಃ=ಸಂನ್ಯಾಸಿಯ ವೇಷದಿಂದ ಪರ್ಣಶಾಲಾಂ=(ರಾಮನ) ಪರ್ಣಶಾಲೆಯನ್ನು ಪ್ರವಿಶ್ಯ=ಪ್ರವೇಶಿಸಿ ಅನಘಾಂ=ಅಕಳಂಕಿನಿಯಾದ ಜನಕನಂದಿನೀಂ=ಜಾನಕಿಯನ್ನು ಅಚೋಚುರತ್ಕಿಲ=ಅಪಹರಿಸಿದೆಯಷ್ಟೆ.

"ಪುರುಷರೊಳಗೆ ಅಧಮನಾದ ನೀನಾದರೋ ಸಿಂಹಗಳೆರಡರ ಮುಂದೆ ನಿಲ್ಲಲು ಶಕ್ತಿಯಿಲ್ಲದ ನರಿಯಂತೆ ಪುರುಷಸಿಂಹರುಗಳಾದ ರಾಮಲಕ್ಷ್ಮಣರು ಹೊರಗೆ ಹೋಗಿರುವಾಗ ಸಂನ್ಯಾಸಿಯ ವೇಷದಿಂದ ರಾಮನ ಪರ್ಣಶಾಲೆಯನ್ನು ಪ್ರವೇಶ ಮಾಡಿ ಅಕಳಂಕಿನಿಯಾದ ಸೀತೆಯನ್ನು ಅಪಹರಿಸಿದೆಯಲ್ಲವೆ?"

ತಸ್ಯಾ ಮಾರ್ಗ ಗವೇಷಣಾಯ ಕಟಕೇಷು ಪ್ರಸ್ಥಾಪಿತೇಷ್ವೇಕಃ
ಸ್ತೀರ್ತ್ವಾ ಜಲಧಿಂ ಪ್ರವಿಶ್ಯ ನಗರೀಂ ದೃಷ್ಟ್ವಾ ವಿದೇಹಾತ್ಮಜಾಂ
ಜ್ಞಾತವ್ಯಂ ಭವತಾ ಮಮಾಗಮನಮಿತ್ಯಾರಾಮಭಂಗಂ ವ್ಯಧಾಂ
ವೀರಾನಕ್ಷಮುಖಾನ್ ರಣೇ ದಶಮುಖ ಜ್ಞಾತುಂ ಕಿ ಮಾದ್ಯಂ ತತಃ ॥೧೪॥

ತಸ್ಯಾಃ=ಆ ಸೀತೆಯ ಮಾರ್ಗಗವೇಷಣಾಯ=ಮಾರ್ಗವನ್ನು (ಎಲ್ಲಿರುವಳೆಂಬುದನ್ನು) ಹುಡುಕಲು ಪ್ರಸ್ಥಾಪಿತೇಷು=ಕಳುಹಿಸಲ್ಪಟ್ಟಿರುವ ಕಟಕೇಷು=ಕಪಿಗಳಲ್ಲಿ ಅಹಂ=ನಾನು ಏಕಃ=ಒಬ್ಬನಾಗಿದ್ದು ಜಲಧಿಂ=ಸಾಗರವನ್ನು ತೀರ್ತ್ವಾ=ದಾಟಿ ನಗರೀಂ=ಲಂಕಾಪಟ್ಟಣವನ್ನು ಪ್ರವಿಶ್ಯ=ಪ್ರವೇಶಿಸಿ ವಿದೇಹಾತ್ಮಜಾಂ=ವಿದೇಹರಾಜನ ಮಗಳಾದ ಸೀತೆಯನ್ನು ದೃಷ್ಟ್ವಾ=ನೋಡಿ ಮಮಾಗಮನಂ=ನನ್ನ ಆಗಮನವು ಭವತಾ ಜ್ಞಾತವ್ಯಂ=ನಿಮ್ಮಿಂದ ತಿಳಿಯಲ್ಪಡಲಿ

ಇತಿ=ಎಂಬುದಾಗಿ ಆರಾಮಭಂಗಂ=ಉದ್ಯಾನವನದ ಹಾಳುಮಾಡುವಿಕೆಯನ್ನು ವ್ಯಧಾಂ=ಉಂಟುಮಾಡಿದೆನು ವೀರಾನ್ಅಪಿ=ವೀರರನ್ನೂ ಸಹ ರಣೇ=ಯುದ್ಧದಲ್ಲಿ ಅಹನಂ= ಕೊಂದಿರುವೆನು ಹೇ ದಶಮುಖ=ಎಲೈ ರಾವಣನೇ ಆದ್ಯಂತತಃ=ಪ್ರಾರಂಭದಿಂದ ಕಡೆಯವರೆಗೂ ಜ್ಞಾತಂ ಕಿಂ=ತಿಳಿಯಲ್ಪಟ್ಟಿತು ಅಲ್ಲವೆ?

"ಆ ಸೀತೆಯ ಜಾಡನ್ನು ಹುಡುಕಲು ಕಳುಹಿಸಲ್ಪಟ್ಟಿರುವ ಕಪಿಗಳಲ್ಲಿ ನಾನು ಒಬ್ಬನಾಗಿದ್ದು ಸಾಗರವನ್ನು ದಾಟಿ ಲಂಕಾಪಟ್ಟಣವನ್ನು ಪ್ರವೇಶಿಸಿ ವಿದೇಹರಾಜನ ಮಗಳಾದ ಸೀತೆಯನ್ನು ನೋಡಿ, "ನನ್ನ ಆಗಮನವು ನಿಮ್ಮಿಂದ ತಿಳಿಯಪಡಲಿ" ಎಂಬುದಾಗಿ ಉದ್ಯಾನವನವನ್ನು ಹಾಳು ಮಾಡಿದೆನು ಮತ್ತು ವೀರರನ್ನೂ ಸಹ ಯುದ್ಧದಲ್ಲಿ ಸಂಹರಿಸಿರುವೆನು. ಎಲೈ ದಶಮುಖನೆ, ವಿವರವು ಆರಂಭದಿಂದ ಅಂತ್ಯದವರೆಗೂ ತಿಳಿಯಲ್ಪಟ್ಟಿತಲ್ಲವೆ?"

ಜಾಯಾವಿಧೇಯೇತ್ಯ ಮತಿರ್ಭವಾನ್ಯಾ-
ಮಿಚ್ಛತ್ಯಪಾಪಾಂ ರಘುವೀರ ಪತ್ನೀಂ
ತ್ವತ್ಪ್ರಾಣವಾತಾ ಹರಣಾಯ ಜಾತಾಂ
ಜಾನೀಹಿ ತಾಂ ಕಾಲಭುಜಂಗಕನ್ಯಾಂ ॥೨೫॥

ಅಮತಿಃ=ಬುದ್ಧಿಯಿಲ್ಲದವನಾದ ಭವಾನ್=ನೀನು ಅಪಾಪಾಂ=ಯಾವ ತಪ್ಪನ್ನೂ ಮಾಡದ ಯಾಂ=ಯಾವ ರಘುವೀರ ಪತ್ನೀಂ=ರಾಮನ ಹೆಂಡತಿಯಾದ ಸೀತೆಯನ್ನು ಜಾಯಾಂ=ಹೆಂಡತಿಯಾಗಿ ವಿಧೇಯಾ=ಮಾಡಿಕೊಳ್ಳತಕ್ಕವಳು ಇತಿ=ಎಂಬುದಾಗಿ ಇಚ್ಛತಿ=ಯೋಚಿಸುವಿಯೋ ತಾಂ=ಅವಳನ್ನು ತ್ವತ್=ನಿನ್ನ ಪ್ರಾಣವಾತ ಆಹರಣಾಯ= ಪ್ರಾಣವಾಯುವನ್ನು ಅಪಹರಿಸಲು ಜಾತಾಂ=ಹುಟ್ಟಿರುವ ಕಾಲಭುಜಂಗನ್ಯಾಂ=ವಿಷ ಸರ್ಪದ ಕನ್ಯೆಯೆಂಬುದಾಗಿ ಜಾನೀಹಿ=ತಿಳಿದುಕೋ.

"ಬುದ್ಧಿಯಿಲ್ಲದವನಾದ ನೀನು ಯಾವ ತಪ್ಪನ್ನೂ (ಪಾಪವನ್ನೂ) ಮಾಡದ ಯಾವ ರಾಮನ ಪತ್ನಿಯನ್ನು ನಿನಗೆ ಹೆಂಡತಿಯಾಗಿರತಕ್ಕವಳು ಎಂದು ಇಚ್ಛಿಸುತ್ತಿರುವೆಯೋ ಅವಳನ್ನು ನಿನ್ನ ಪ್ರಾಣವಾಯುವನ್ನು ಅಪಹರಿಸಲು ಹುಟ್ಟಿರುವ ವಿಷ ಸರ್ಪಕನ್ನಿಕೆಯೆಂಬುದಾಗಿ ತಿಳಿದುಕೋ."

ಸುರಾಸ್ಯೇ ಸುಗ್ರೀವೋಹಿತಮವದದಾರ್ಯಾಂ ಜನಕಜಾಂ
ರಘುಶ್ರೇಷ್ಠಂ ರಾಮಂ ಗಮಯಕರೇಣುಂ ಕುಂಜರಮಿವ
ನಚೇದೇವಂ ರಾಮಾನುಜ ಶರತತ್ಯೈರ್ಯಾತುನಗರೀ
ಭವೇದ್ವಿಶ್ವಸ್ತಾನಾಂ ವಿಲಪನರವೈರ್ನಾದಿತ ದಿಶಾ ॥೨೬॥

ಆರ್ಯಾಂ=ಪೂಜನೀಯಳಾದ ಜನಕಜಾಂ=ಜನಕರಾಜಕುಮಾರಿಯನ್ನು ಕರೇಣುಂ=ಹೆಣ್ಣು ಆನೆಯನ್ನು ಕುಂಜರಮಿವ=ಗಂಡು ಆನೆಯೊಡನೆ ಸೇರುವಂತೆ ರಘುಶ್ರೇಷ್ಠಂ=ರಘು ವಂಶದಲ್ಲೇ ಶ್ರೇಷ್ಠನಾದ ರಾಮಂ=ರಾಮನನ್ನು ಗಮಯ=ಸೇರುವಂತೆ ಮಾಡು ಏವಂ=ಈ ರೀತಿ ನಚೇತ್=ಮಾಡದಿದ್ದರೆ ನಗರೀ=ಲಂಕೆಯು ರಾಮಾನುಜಶರತತ್ಯೈ=ರಾಮನ ಸೋದರ ಲಕ್ಷ್ಮಣನ ನೂರಾರು ಬಾಣಗಳಿಂದ ವಿಶ್ವಸ್ತಾನಾಂ=ನಿನ್ನಲ್ಲಿ ವಿಶ್ವಾಸ ಮಾಡುವವರ ವಿಲಪನರವೈಃ=ರೋಧನ ಧ್ವನಿಯಿಂದ ನಾದಿತ=ಪ್ರತಿಧ್ವನಿಸಲ್ಪಡುವ ದಿಶಾ=ದಿಕ್ಕುಗಳಿಂದ ಕೂಡಿದ್ದು ಭವೇತ್=ಆಗುವುದು.

ಇತಿ-ಹೀಗೆ ತೇ-ನಿನ್ನಮ್ಮ ಸಖಾ-ಸ್ನೇಹಿತನಾದ ಸುಗ್ರೀವಃ-ಸುಗ್ರೀವನು ಹಿತಂ-ಒಳ್ಳೆಯದನ್ನು ಅವದತ್-ಹೇಳಿದನು.

"ಪೂಜನೀಯಳಾದ ಜಾನಕಿಯನ್ನು ಹೆಣ್ಣು ಆನೆಯನ್ನು ಗಂಡು ಆನೆಯೊಂದಿಗೆ ಸೇರಿಸುವಂತೆ ರಘುಶ್ರೇಷ್ಠನಾದ ರಾಮನೊಂದಿಗೆ ಸೇರುವಂತೆ ಮಾಡು. ಈ ರೀತಿ ಮಾಡದಿದ್ದರೆ ಲಂಕಾಪಟ್ಟಣವು ರಾಮನ ಸೋದರ ಲಕ್ಷ್ಮಣನ ನೂರಾರು ಬಾಣಗಳಿಂದ ನಿನ್ನಲ್ಲಿ ವಿಶ್ವಾಸ ಮಾಡುವವರ ರೋಧನಧ್ವನಿಯಿಂದ ಪ್ರತಿಧ್ವನಿಸಲ್ಪಡುವ ದಿಕ್ಕುಗಳಿಂದ ಕೂಡಿದ್ದಾಗುತ್ತದೆ. ಹೀಗೆ ನಿನ್ನ ಸ್ನೇಹಿತನಾದ ಸುಗ್ರೀವನು ನಿನಗೆ ಒಳ್ಳೆಯದನ್ನು ಹೇಳಿ ಕಳುಹಿಸಿದ್ದಾನೆ."

ಏವಂಬ್ರುವಾಣಸ್ಯ ಸಮೀರ ಸೂನೋಃ
ವಧಂ ಸಮಾಜ್ಞಾಪಯದಾಶರೇಂದ್ರಃ
ದೂತಾನವಧ್ಯಾ ಭುವನೇಷು ವೀರೈ
ರಿತಿನ್ಯಷೇಧತ್ತ ಮಥೋವಿಭೀಷಣಃ ॥೧೭॥

ಏವಂ-ಈ ರೀತಿ ಬ್ರುವಾಣಸ್ಯ- ಹೇಳುವ ಸಮೀರ ಸೂನೋಃ-ವಾಯುಪುತ್ರ ಹನುಮಂತನ ವಧಂ-ವಧೆಯನ್ನು ಮಾಡಲು ಆಶರೇಂದ್ರಃ-ರಾಕ್ಷಸ ರಾಜ ರಾವಣನು ಸಮಾಜ್ಞಾಪಯತ್-ಆಜ್ಞಾಪಿಸಿದನು. ಅಥ-ಅನಂತರ ವಿಭೀಷಣಃ-ವಿಭೀಷಣನು ಭುವನೇಷು-ಪ್ರಪಂಚದಲ್ಲಿ ದೂತಾಃ-ದೂತರು ವೀರೈಃ-ವೀರರುಗಳಿಂದ ನವಧ್ಯಾಃ-ಕೊಲ್ಲಲ್ಪಡುವಂತಹವರಲ್ಲ ಇತಿ-ಹೀಗೆ ನ್ಯಷೇಧತ್-ತಡೆದನು.

ಈ ರೀತಿ ಹೇಳುವ ವಾಯುಪುತ್ರ ಹನುಮಂತನ ವಧೆ ಮಾಡಲು ರಾವಣನು ಆಜ್ಞೆ ಮಾಡಿದನು. ಆಗ ವಿಭೀಷಣನು ಪ್ರಪಂಚದಲ್ಲಿ ದೂತರು ವೀರರುಗಳಿಂದ ಕೊಲ್ಲಲ್ಪಡಬಾರದು ಎಂಬುದಾಗಿ ಅದನ್ನು ತಡೆದನು.

ಪಟ್ಟೈಃ ಸಂವೇಷ್ಟ್ಯ ತೈಲೇನ ಸಿಕ್ತ್ವಾ ಸಂಯೋಜ್ಯವಹ್ನಿನಾ
ವಾಲಮಸ್ಯ ದಶಗ್ರೀವಃ ಕಾರಯಾಮಾಸ ಘೋಷಣಾಂ ॥೧೮॥

ದಶಗ್ರೀವಃ-ರಾವಣನು ಅಸ್ಯ-ಈ ಹನುಮಂತನ ವಾಲಂ-ಬಾಲವನ್ನು ಪಟ್ಟೈಃ-ಬಟ್ಟೆಗಳಿಂದ ಸಂವೇಷ್ಟ್ಯ-ಸುತ್ತಿ ತೈಲೇನ-ಎಣ್ಣೆಯಿಂದ ಸಿಕ್ತ್ವಾ-ನೆನೆಸಿ ವಹ್ನಿನಾ-ಬೆಂಕಿಯಿಂದ ಸಂಯೋಜ್ಯ-ಹಚ್ಚಿರಿ ಎಂದು ಘೋಷಣಾ-ಢಂಗೂರವನ್ನು ಕಾರಯಾಮಾಸ-ಹೊಡೆಸಿದನು.

ರಾವಣನು "ಈ ಹನುಮಂತನ ಬಾಲವನ್ನು ಬಟ್ಟೆಯಿಂದ ಸುತ್ತಿ ಎಣ್ಣೆಯಿಂದ ನೆನೆಸಿ ಬೆಂಕಿಯಿಂದ ಹಚ್ಚಿರಿ" ಎಂದು ಢಂಗೂರ ಸಾರಿಸಿದನು.

ಗದ್ಯ ॥ ವಿದಿತ ವೃತ್ತಾಂತಯಾ ನಿತಾಂತ ತಾಂತಯಾಧರಾಸುತಯಾ,
"ಯದ್ಯಹಂ ಪತಿವ್ರತಾಧವಳಿತೋ ಹನುಮತಃ" ಇತ್ಯಾಹಿತಂ
ವಿಹಿ. ಲಾಂಗೂಲಭೋಜನೋಽಪಿ ಅದಹನಂ ಶೀತಾವಂತ ಮವೇಕ್ಷ್ಯ, ತಾದಾತ್ಮ್ಯಗ
ವಶಿಷ್ಟಃ ಪ್ರತ್ಯಕ್ಷಮಹಾಃ ವಿಚ್ಛಿದ್ಯ ಬಂಧನಾನ್, ನಿಷ್ಕ್ರಮ್ಯ ಘೋಷಯಿತೋ
ನಿಶಾಚರಾನ್, ಧಗ್ಧ ಧಗ್ಧ ಧಗ್ಧ ವಿತ್ತ್ರಾಗಾ ಶಿಖ್ಯೈವ ಲಂಕಾಂ, ಪ್ರಾಣಮ್ಯ

ಜಾನಕೀಂ, ನಿಸ್ತೀರ್ಯ ಜಲಧಿಂ, ಆನಂದಯಾಮಾಸ ಸೀತೋ
ದಂತಕಥನೇನ ಜಾಂಬವಾದೀನ್ ವಾಹಿನೀಪತೀನ್ ॥

ವಿದಿತ ವೃತ್ತಾಂತಯಾ=ತಿಳಿಯಲ್ಪಟ್ಟ ವಿಷಯವುಳ್ಳ ನಿತಾಂತಕಾಂತಯಾ=ಬಹಳ ದುಃಖಗೊಂಡ ಧರಸುತಯಾ=ಭೂಪುತ್ರಿ ಸೀತೆಯಿಂದ 'ಅಹಂ=ನಾನು ಪತಿವ್ರತಾ ಯದಿ=ಒಂದು ವೇಳೆ ಪತಿವ್ರತೆಯಾದರೆ ಹನುಮತಃ ಶೀತೋಭವ=ಹನುಮಂತನಿಗೆ ತಣ್ಣಗೆ ಆಗು ಇತಿ=ಎಂಬುದಾಗಿ ಶಾಪಿತಂ=ಆಣೆ ಇಡಲ್ಪಟ್ಟವನಾಗಿ ನಿಜಲೂಮಲೋಮೋಪಿ=ತನ್ನ ಬಾಲದ ಕೂದಲನ್ನು ಕೂಡ ಅದಹಂತಂ=ಸುಡದಿರುವ ಶಿಖಾವಂತಂ=ಅಗ್ನಿಯನ್ನು ಅವೇಕ್ಷ್ಯ=ಕಂಡು ಶಾಖಾಮೃಗವರಿಷ್ಠಃ=ಕಪಿಶ್ರೇಷ್ಠ ಹನುಮಂತನು ಪ್ರಹೃಷ್ಟಮನಾಃ=ಸಂತೋಷದಿಂದ ಮನಸ್ಸುಳ್ಳವನಾಗಿ ಬಂಧಾನ್ ವಿಚ್ಛಿದ್ಯ=ಕಟ್ಟುಗಳನ್ನು ತುಂಡರಿಸಿ ಘೋಷಯತಃ=ಡಂಗೂರ ಸಾರುತ್ತಿರುವ ನಿಶಾಚರಾನ್=ರಾಕ್ಷಸರನ್ನು ನಿಕ್ಷಿಪ್ಯ=ನಾಶ ಮಾಡಿ ತೇನೈವ=ಅದೇ ಕೃಷ್ಣವರ್ತ್ಮನಾ=ಬೆಂಕಿಯಿಂದ ಲಂಕಾಂ=ಲಂಕೆಯನ್ನು ಭಸ್ಮೀಕೃತ್ಯ=ಸುಟ್ಟುಹಾಕಿ ಜಾನಕೀಂ ಪ್ರಣಮ್ಯ=ಸೀತೆಯನ್ನು ನಮಸ್ಕರಿಸಿ ಜಲಧಿಂ ನಿಸ್ತೀರ್ಯ=ಸಮುದ್ರವನ್ನು ದಾಟಿ ಸೀತೋದಂತಕಥನೇನ=ಸೀತೆಯ ವೃತ್ತಾಂತವನ್ನು ಹೇಳುವುದರಿಂದ ಜಾಂಬವಾದೀನ್=ಜಾಂಬವಂತ ಮುಂತಾದ ವಾಹಿನೀಪತೀನ್=ಸೇನೆಯ ಮುಖ್ಯಸ್ಥರನ್ನು ಆನಂದಯಾಮಾಸ=ಸಂತೋಷಪಡಿಸಿದನು.

ತಿಳಿಯಲ್ಪಟ್ಟ ಸಮಾಚಾರದಿಂದ ದುಃಖಿತಳಾದ ಭೂಪುತ್ರಿ ಸೀತೆಯಿಂದ "ನಾನು ಒಂದು ವೇಳೆ ಪತಿವ್ರತೆಯಾದರೆ ಹನುಮಂತನಿಗೆ ಬೆಂಕಿ ತಣ್ಣಗೆ ಆಗಲಿ" ಎಂಬುದಾಗಿ ಆಣೆ ಇಡಲ್ಪಟ್ಟವನಾಗಿ ಹನುಮಂತನು ತನ್ನ ಬಾಲದ ಕೂದಲನ್ನೂ ಸಹ ಸುಡದಿರುವ ಅಗ್ನಿಯನ್ನು ಕಂಡು ಸಂತಸಮನಸ್ಕನಾಗಿ ಕಟ್ಟುಗಳನ್ನು ಬಿಡಿಸಿಕೊಂಡು ಡಂಗೂರ ಸಾರುತ್ತಿರುವ ರಾಕ್ಷಸರನ್ನು ಸಂಹರಿಸಿ ಅದೇ ಬೆಂಕಿಯಿಂದ ಲಂಕಾಪಟ್ಟಣವನ್ನು ಸುಟ್ಟುಹಾಕಿ ಜಾನಕಿಗೆ ನಮಸ್ಕರಿಸಿ ಸಮುದ್ರವನ್ನು ದಾಟಿ ಸೀತೆಯ ವೃತ್ತಾಂತ ಕಥನದಿಂದ ಜಾಂಬವಂತ ಮುಂತಾದ ಸೇನಾ ಮುಖಂಡರನ್ನು ಆನಂದ ಪಡಿಸಿದನು.

ತತ ಉಚ್ಛ್ರಿತ ಲಾಂಗೂಲಾಃ ಪ್ಲವಗೇಶಾಃ ಪ್ರತಸ್ಥಿರೇ
ಪ್ರವೃತ್ತಿಮೇತಾಂ ಸೀತಾಯಾಃ ರಾಮಾಯಾಶು ವಿವಕ್ಷವಃ ॥೧೯॥

ತತಃ=ಅನಂತರ ಪ್ಲವಗೇಶಾಃ=ಕಪಿಶ್ರೇಷ್ಠರು ಉಚ್ಛ್ರಿತ ಲಾಂಗೂಲಾಃ=ಎತ್ತಿದ ಬಾಲವುಳ್ಳವರಾಗಿ ಸೀತಾಯಾಃ=ಸೀತೆಯ ಏತಾಂಪ್ರವೃತ್ತಿಂ=ಈ ವೃತ್ತಾಂತವನ್ನು ಆಶು=ಬೇಗನೆ ರಾಮಾಯ=ರಾಮನಿಗೆ ವಿವಕ್ಷವಃ=ಹೇಳಬೇಕೆಂಬ ಆಕಾಂಕ್ಷೆಯಿಂದ ಪ್ರತಸ್ಥಿರೇ=ಹೊರಟರು.

ಅನಂತರ ಕಪಿವೀರರು ಎತ್ತಿದ ಬಾಲವುಳ್ಳವರಾಗಿ ಸೀತೆಯ ಈ ವೃತ್ತಾಂತವನ್ನು ಬೇಗನೆ ರಾಮನಿಗೆ ತಿಳಿಸಬೇಕೆಂಬ ಆಸೆಯಿಂದ ಹೊರಟರು.

ಪಥಿ ಸ್ಥಿತಂ ಮಧುವನಂ ಸುಗ್ರೀವಸ್ಯ ವಲೀಮುಖಾಃ
ಪ್ರವಿಶ್ಯ ಮಾರುತ್ಯಾದೇಶಾತ್ ಪಪುರ್ಮಧು ಪಿಪಾಸಿತಾಃ ॥೨೦॥

ಮಧುಪಿಪಾಸಿತಾಃ=ಮಧುವಿನ ದಾಹದಿಂದ ಕೂಡಿದ ವಲೀಮುಖಾಃ=ವಾನರರು

ಪಥಿ-ದಾರಿಯಲ್ಲಿ, ಸ್ಥಿತಂ-ಇರುವ ಸುಗ್ರೀವಸ್ಯ-ಸುಗ್ರೀವನ ಮಧುವನಂ-ಮಧುವನವೆಂಬ ತೋಟವನ್ನು ಮಾರುತಿ ಆದೇಶಾತ್-ಹನುಮಂತನ ಅಪ್ಪಣೆಯಂತೆ ಪ್ರವಿಶ್ಯ-ಪ್ರವೇಶಿಸಿ ಮಧು-ಜೇನನ್ನು ಪಪು-ಕುಡಿದರು.

ಮಧುವಿನ ದಾಹದಿಂದ ವಾನರರು ಹಾದಿಯಲ್ಲಿ ಇರುವ ಸುಗ್ರೀವನ ಮಧುವನದೊಳಕ್ಕೆ ಹನುಮಂತನ ಆದೇಶದಂತೆ ಪ್ರವೇಶಿಸಿ ಜೇನನ್ನು ಕುಡಿದರು.

ಗದ್ಯ || ಅಮೀಚ ತತ್ರಾತ್ಮನೋ ನಿವಾರಯಂತಂ ವನಪಾಲಂ ದಧಿಮುಖಂ
ಭ್ರೂದಂತಜಿಹ್ವಾದಿ ನಿಜಾವಯವ ದರ್ಶನಾದಿನಾ ಪರಿಹಾಸೇನ,
ದಂತೈರ್ದಂಶನೇನ, ನಖೈಃ ವಿದಾರಣೇನ, ಪಾಣಿಭ್ಯಾಂ ಚಪೇಟಾ-
ಪ್ರದಾನೇನ, ಪಾದೈರಾಘಾತೇನ, ದಂಡೈಸ್ತಾಡನೇನ, ವೃಕ್ಷೈಃ
ಪ್ರಹಾರೇಣ, ಗಂಡೋಪಲೈಃ ಪಿಂಡೀಕರಣೇನ ಚತಂ ಕಾಂದಿಶೀಕಂ
ವಿಧಾಯ ಸತ್ವರಂ ಪ್ರಧಾವ್ಯ, ಸಲಕ್ಷ್ಮಣ ಸುಗ್ರೀವಂ, ರಾಘವ
ಮಹಮಹಮಿಕಯಾ ಪ್ರಣೇಮುಃ ||

ಅಮೀಚ-ಇವರುಗಳು ಆದರೋ ತತ್ರ-ಅಲ್ಲಿ ಆತ್ಮನಃ-ತಮ್ಮನ್ನು ನಿವಾರಯಂತಂ-ತಡೆದ ವನಪಾಲಂ-ಮಧುವನದ ಪಾಲಕನಾದ ದಧಿಮುಖಂ-ದಧಿಮುಖನನ್ನು ಭ್ರೂದಂತ ಜಿಹ್ವಾದಿ-ಹುಬ್ಬು, ಹಲ್ಲು, ನಾಲಿಗೆ ಮುಂತಾದ ನಿಜಾವಯವ ದರ್ಶನಾದಿನಾ-ತಮ್ಮ ಅಂಗಗಳನ್ನು ತೋರಿಸಿ ಪರಿಹಾಸೇನ-(ಮಾಡುವ) ಪರಿಹಾಸಗಳಿಂದಲೂ ದಂತೈಃ ದಂಶನೇನ-ಹಲ್ಲುಗಳಿಂದ ಕಡಿಯುವುದರಿಂದಲೂ, ನಖೈಃವಿದಾರಣೇನ-ಉಗುರುಗಳಿಂದ ಪರಚುವುದರಿಂದಲೂ ಪಾಣಿಭ್ಯಾಂಚಪೇಟಾಪ್ರದಾನೇನ-ಕೈಗಳಿಂದ ಕೆನ್ನೆಗಳಲ್ಲಿ ಹೊಡೆಯುವುದರಿಂದಲೂ ಪಾದೈಃ ಆಘಾತೇನ-ಕಾಲುಗಳಿಂದ ನೋವನ್ನು ಉಂಟು ಮಾಡುವುದರಿಂದಲೂ ದಂಡೈಸ್ತಾಡನೇನ- ಕೋಲುಗಳಿಂದ ಹೊಡೆಯುವುದರಿಂದಲೂ ವೃಕ್ಷೈಃ ಪ್ರಹಾರೇಣ-ಮರಗಳಿಂದ ಪ್ರಹರಿಸುವುದರಿಂದಲೂ ಗಂಡೋಪಲೈಃ ಪಿಂಡೀಕರಣೇನ-ಗುಂಡುಕಲ್ಲುಗಳಿಂದ ಪಿಂಡವಾಗುವಂತೆ ಮಾಡುವುದರಿಂದಲೂ ತಂ-ಅವನನ್ನು ಕಾಂದಿಶೀಕಂ-ಭಯದಿಂದ ಓಡಿಹೋಗುವಂತೆ ವಿಧಾಯ-ಮಾಡಿ ಸತ್ವರಾ-ಬೇಗನೆ ಪ್ರಧಾವ್ಯ-ತಾವೂ ಓಡಿಹೋಗಿ ಸಲಕ್ಷ್ಮಣಸುಗ್ರೀವಂ-ಲಕ್ಷ್ಮಣ ಸುಗ್ರೀವರೊಡನೆ ಇದ್ದ ರಾಘವಂ-ರಾಮನನ್ನು ಅಹಮಹಮಿಕಯಾ-ನಾಮ ಮುಂದು ತಾಮ ಮುಂದು ಎನ್ನುವ ಸ್ಪರ್ಧೆಯಿಂದ ಪ್ರಣೇಮುಃ-ನಮಸ್ಕರಿಸಿದರು.

ಇವರುಗಳಾದರೋ ಅಲ್ಲಿ ತಮ್ಮನ್ನು ತಡೆದ ಮಧುವನದ ಪಾಲಕನಾದ ದಧಿಮುಖನೆಂಬುವನನ್ನು ಹುಬ್ಬು, ಹಲ್ಲು, ನಾಲಿಗೆ ಮುಂತಾದ ತಮ್ಮ ಅಂಗಾಂಗಗಳ ಪ್ರದರ್ಶನದಿಂದ ಪರಿಹಾಸ ಮಾಡಿ, ಹಲ್ಲುಗಳಿಂದ ಕಡಿದು, ಉಗುರುಗಳಿಂದ ಪರಚಿ, ಕೈಗಳಿಂದ ಕೆನ್ನೆಗಳಲ್ಲಿ ಹೊಡೆದು, ಕಾಲುಗಳಿಂದ ನೋವನ್ನುಂಟುಮಾಡಿ, ಕೋಲುಗಳಿಂದ ಹೊಡೆದು, ಮರಗಳಿಂದ ಪ್ರಹರಿಸಿ, ಗುಂಡುಕಲ್ಲುಗಳಿಂದ ಪಿಂಡವಾಗುವಂತೆ ಮಾಡಿ, ಅವನನ್ನು ಭಯದಿಂದ ಓಡುವಂತೆ ಮಾಡಿ, ಬೇಗನೆ ತಾವೂ ಅಲ್ಲಿಂದ ಓಡಿಹೋಗಿ ಲಕ್ಷ್ಮಣ ಸುಗ್ರೀವ ಸಹಿತನಾಗಿದ್ದ

ರಾಮಚಂದ್ರನನ್ನು ನಾ ಮುಂದು ತಾ ಮುಂದು ಎನ್ನುವ ಸ್ಪರ್ಧೆಯೊಡನೆ ಸೇರಿ ನಮಸ್ಕರಿಸಿದರು.

**ಸೀತಾ ಪ್ರವೃತ್ತಿಂ ವಿಜ್ಞಾಪ್ಯ ರಾಘವಾಯಾಂಜನಾತ್ಮಜಃ**
**ಸರ್ವಸ್ವ ದಾನ ಸದೃಶಂ ರಾಮಾಲಿಂಗನ ಮನ್ವಭೂತ್ ॥೬೧॥**

ಅಂಜನಾತ್ಮಜಃ=ಅಂಜನೆಯ ಮಗನಾದ ಹನುಮಂತನು ರಾಘವಾಯ=ರಾಮನಿಗೆ ಸೀತಾಪ್ರವೃತ್ತಿಂ=ಸೀತೆಯ ವೃತ್ತಾಂತವನ್ನು ವಿಜ್ಞಾಪ್ಯ=ತಿಳಿಸಿ ಸರ್ವಸ್ವ=ತನ್ನ ಸರ್ವಸ್ವವನ್ನು ದಾನಸದೃಶಂ=ಕೊಡುವಿಕೆಗೆ ಸಮಾನವಾದ ರಾಮಾಲಿಂಗನಂ=ರಾಮನ ಆಲಿಂಗನವನ್ನು ಅನ್ವಭೂತ್=ಅನುಭವಿಸಿದನು.

ಅಂಜನೇಯನು ರಾಮನಿಗೆ ಸೀತಾ ವೃತ್ತಾಂತವನ್ನು ತಿಳಿಸಲು ತನ್ನ ಸರ್ವಸ್ವವನ್ನೂ ಕೊಡುವಿಕೆಗೆ ಸಮಾನವಾದ ರಾಮನ ಆಲಿಂಗನ ಭಾಗ್ಯವನ್ನು ಅನುಭವಿಸಿದನು.

*ಇತಿ ಸುಂದರ ಕಾಂಡಃ*

*ಸುಂದರ ಕಾಂಡವು ಮುಗಿಯಿತು.*

# ಅಥ ಯುದ್ಧಕಾಂಡಃ

# ಯುದ್ಧಕಾಂಡ

ಅಥ ನಿಶಾಚರನಾಥಪುರಸ್ಥಿತಾಂ
ಜನಕಜಾಮವಕರ್ಣ್ಯ ರಘೂದ್ವಹಃ
ಸಸಮಲೋಕತ ತೂಣ ಯುಗಂಧನುಃ
ಪ್ರಳಯಪಾವಕ ದಾಹಿಕಯೋದ್ಧೃಶಾ ॥೧॥

ಅಥ=ಅನಂತರ ಸಃ ರಘೂದ್ವಹಃ=ಆ ರಘುನಾಥನು ಜನಕಜಾಂ=ಸೀತೆಯನ್ನು ನಿಶಾಚರನಾಥಪುರಸ್ಥಿತಾಂ=ರಾಕ್ಷಸರಾಜ ರಾವಣನ ಪಟ್ಟಣದಲ್ಲಿ ಇರುವವಳಾಗಿ ಅವಕರ್ಣ್ಯ=ಕೇಳಿ ಪ್ರಳಯಪಾವಕದಾಹಿಕಯಾದ್ಧೃಶಾ=ಪ್ರಳಯಾಗ್ನಿಯಂತೆ ಉರಿಯಿಂದ ಕೂಡಿದ ನೋಟದೊಡನೆ ತೂಣಯುಗಂ=ಎರಡು ಬತ್ತಳಿಕೆಗಳನ್ನೂ ಧನುಃ=ಬಿಲ್ಲನ್ನೂ ಸಮಲೋಕತ=ನೋಡಿದನು.

ಅನಂತರದಲ್ಲಿ ಆ ರಾಮಚಂದ್ರನು ಸೀತೆಯನ್ನು ರಾಕ್ಷಸರಾಜ ರಾವಣನ ಪಟ್ಟಣದಲ್ಲಿ ಇರುವವಳಾಗಿ ಕೇಳಿ ಪ್ರಳಯಾಗ್ನಿಯಂತೆ ಉರಿಯುವ ತೀಕ್ಷ್ಣ ನೋಟದೊಡನೆ ಎರಡು ಬತ್ತಳಿಕೆಗಳನ್ನು, ಬಿಲ್ಲನ್ನೂ ಈಕ್ಷಿಸಿದನು.

ಗದ್ಯ ॥ ಅಥ ಸುಗ್ರೀವ ನಿದೇಶ ಪ್ರಚಲಿತಮಾಂಜನೇಯ ತಾರೇಯ
ಸಮಾರೂಢ ರಾಮಲಕ್ಷ್ಮಣ ನಿರೀಕ್ಷಣ ದ್ವಿಗುಣಿತ ರಣೋತ್ಸಾಹಂ,
ಪ್ಲವಂಗಮರ್ಕ್ಷ್ಯಗೋಲಾಂಗೂಲಬಲಂ ಉತ್ಪ್ಲವನೇನೈವ ವಿಲಂಘಿತ
ನಗ ನದೀವಿಪಿನಂಸನ್, ಉದಧಿ ವೇಲಾನಿಲಮನೋಹರೆ,
ಮಹೇಂದ್ರ ಶಿಖರಕಾಂತಾರೇ, ಫಲಮಧೂಪಹಾರೇಣ, ಅಧ್ವಶ್ರಮ
ಮುಪಾನಯತ್ ॥

ಅಥ=ಅನಂತರ ಸುಗ್ರೀವ ನಿದೇಶ ಪ್ರಚಲಿತಂ=ಸುಗ್ರೀವನ ಅಪ್ಪಣೆಯಿಂದ ಹೊರಟ ಆಂಜನೇಯ ತಾರೇಯ ಸಮಾರೂಢ ರಾಮಲಕ್ಷ್ಮಣ ನಿರೀಕ್ಷಣ ದ್ವಿಗುಣಿತ ರಣೋತ್ಸಾಹಂ=ಹನುಮಂತ, ಅಂಗದ ಇವರ ಮೇಲೆ ಏರಿದಂತಹ ರಾಮಲಕ್ಷ್ಮಣರ ನೇತೃತ್ವದಲ್ಲಿ ಎರಡು ಪಟ್ಟು ಯುದ್ಧ ಮಾಡುವ ಉತ್ಸಾಹ ಹೊಂದಿದ ಪ್ಲವಂಗಮ=ವಾನರರ ಋಕ್ಷ=ಕರಡಿಗಳ, ಗೋಲಾಂಗೂಲ=ಕೋಡಂಗಿಗಳ (ಕಾಡುಮನುಷ್ಯ) ಬಲಂ=ಸೈನ್ಯವು ಉತ್ಪ್ಲವನೇನ ಏವ=ಹಾರುವಿಕೆಯಿಂದಲೇ ವಿಲಂಘಿತ=ದಾಟಲ್ಪಟ್ಟ ನಗನದೀವಿಪಿನಂ ಸನ್=ಪರ್ವತ, ನದಿಗಳು, ಕಾಡುಗಳನ್ನು ಕೂಡಿ ಉದಧಿ ವೇಲಾನಿಲಮನೋಹರೆ=ಸಮುದ್ರದ ದಡದಲ್ಲಿ ಮನೋಹರವಾಗಿ ಬೀಸುತ್ತಿರುವ ಗಾಳಿಯಲ್ಲಿಯೂ, ಮಹೇಂದ್ರ ಶಿಖರಕಾಂತಾರೇ=ಮಹೇಂದ್ರ ಪರ್ವತದ ಕಾಡಿನಲ್ಲಿಯೂ ಫಲಮಧೂಪಹಾರೇಣ=ಹಣ್ಣು ಮತ್ತು ಮಧು ಇವುಗಳ ಉಪಹಾರದಿಂದ ಅಧ್ವಶ್ರಮಂ=ಮಾರ್ಗಾಯಾಸವನ್ನು ಅಪಾನಯತ್=ಪರಿಹರಿಸಿಕೊಂಡಿತು.

ಅನಂತರ ಸುಗ್ರೀವನ ಅಪ್ಪಣೆಯಿಂದ ಹೊರಟ ಹನುಮಂತ, ಅಂಗದ ಇವರ ಮೇಲೆ

ವಿರಿದಂತಹ ರಾಮಲಕ್ಷ್ಮಣರ ನೇತೃತ್ವದಲ್ಲಿ ಎರಡು ಪಟ್ಟು ಯುದ್ಧ ಮಾಡುವ ಉತ್ಸಾಹ ಹೊಂದಿದ ವಾನರರ, ಕರಡಿಗಳ, ಕೋಡಂಗಿಗಳ (ಕಾಡುಮನುಷ್ಯರ) ಸೈನ್ಯವು ಹಾರುವಿಕೆಯಿಂದಲೇ ದಾಟಲ್ಪಟ್ಟ ಪರ್ವತ, ನದಿಗಳು ಮತ್ತು ಕಾಡುಗಳನ್ನು ಕೂಡಿ ಸಮುದ್ರದ ದಡದಲ್ಲಿ ಮನೋಹರವಾಗಿ ಬೀಸುತ್ತಿರುವ ಗಾಳಿಯಲ್ಲಿ, ಮಹೇಂದ್ರಗಿರಿಯ ಕಾಡಿನಲ್ಲಿ ಹಣ್ಣು ಮತ್ತು ಮಧು ಇವುಗಳ ಉಪಾಹಾರದಿಂದ ಮಾರ್ಗಾಯಾಸವನ್ನು ಪರಿಹರಿಸಿಕೊಂಡಿತು.

> ಗದ್ಯ ॥ ತದನು ದಶಮುಖಶ್ಚಾರ ಮುಖಾತ್ ಅಜೇಯ ಮಾಗತಂ ಪ್ಲವಂಗಮ
> ಬಲಮಾಕರ್ಣ್ಯ ಕಿಂಕರ್ತವ್ಯತಾಮೂಢಃ ಪ್ರಹಸ್ತಮುಖ ಮಂತ್ರಿ ಸಂದುಕ್ಷಿತಾ
> ಯೋಧನೋತ್ಸಾಹೋ ಹಿತೈಷಿಣಂ ರಾಘವಾಯಸೀತಾ ಸಮರ್ಪಣ
> ಮುಪದಿಶಂತಂ ಅನುಜಂ ವಿಭೀಷಣಂ ಸದಸಿ ಧಿಕ್ಕೃತ್ಯ ನಿಸ್ಸಾರಯಾಮಾಸ ॥

ತದನು=ಅನಂತರ ದಶಮುಖಃ=ರಾವಣನು ಚಾರಮುಖಾತ್=ದೂತರ ಮೂಲಕ ಅಜೇಯಂ=ಜಯಿಸಲಾಗದಂತಹ ಪ್ಲವಂಗಮಬಲಂ=ವಾನರಸೇನೆಯನ್ನು ಆಗತಂ=ಬಂದಿರುವುದಾಗಿ ಆಕರ್ಣ್ಯ=ಕೇಳಿ (ತಿಳಿದು) ಕಿಂಕರ್ತವ್ಯತಾಮೂಢ–ಏನು ಮಾಡಬೇಕೆಂಬುದನ್ನು ಅರಿಯದವನಾಗಿ ಪ್ರಹಸ್ತಮುಖ=ಪ್ರಹಸ್ತ ಮುಂತಾದ ಮಂತ್ರಿ ಸಂದುಕ್ಷಿತ=ಮಂತ್ರಿಗಳಿಂದ ಉತ್ತೇಜಿಸಲ್ಪಟ್ಟ ಆಯೋಧನ ಉತ್ಸಾಹಃ=ಯುದ್ಧ ಮಾಡುವ ಉತ್ಸಾಹದಿಂದ ಹಿತೈಷಿಣಂ=ಹಿತವನ್ನು ಕೋರುವ ರಾಘವಾಯ=ರಾಮನಿಗೆ ಸೀತಾಸಮರ್ಪಣಂ=ಸೀತೆಯನ್ನು ಸಮರ್ಪಿಸುವ ವಿಷಯವನ್ನು ಉಪದಿಶಂತಂ=ಉಪದೇಶಿಸಿದ ಅನುಜಂ=ಸೋದರ ವಿಭೀಷಣಂ=ವಿಭೀಷಣನನ್ನು ಸದಸಿ=ಸಭೆಯಲ್ಲಿ ಧಿಕ್ಕೃತ್ಯ=ಧಿಕ್ಕರಿಸಿ ನಿಸ್ಸಾರಾಯಮಾಸ=ಹೊರಕ್ಕೆ ಕಳುಹಿಸಿದನು.

ಅನಂತರ ರಾವಣನು ದೂತರ ಮೂಲಕ ಜಯಿಸಲಾಗದಂತಹ ವಾನರಸೇನೆಯನ್ನು ಬಂದಿರುವುದಾಗಿ ತಿಳಿದು ಏನು ಮಾಡಬೇಕೆಂಬುದನ್ನು ಅರಿಯದವನಾಗಿ ಪ್ರಹಸ್ತ ಮುಂತಾದ ಮಂತ್ರಿಗಳಿಂದ ಉತ್ತೇಜಿಸಲ್ಪಟ್ಟ ಯುದ್ಧೋತ್ಸಾಹದಿಂದ ಹಿತವನ್ನು ಕೋರುವ, ರಾಮನಿಗೆ ಸೀತೆಯನ್ನು ಒಪ್ಪಿಸುವ ವಿಷಯವನ್ನು ಉಪದೇಶ ಮಾಡಿದ, ವಿಭೀಷಣನನ್ನು ಸಭೆಯಲ್ಲಿ ಧಿಕ್ಕರಿಸಿ ಹೊರಕ್ಕೆ ಅಟ್ಟಿದನು.

> ತತಃ ಸಮಾಗತ್ಯ ಪದೋಃ ಪತಂತಂ
> ವಿಭೀಷಣಂ ದ್ರಾಗಭಿಷಿಚ್ಯರಾಜ್ಯೇ
> ಉಪೇಕ್ಷಮಾಣಂ ಜಲಧಿಂ ನಿಜಾರ್ಥನಾಂ
> ಧನಂಜಯಾಸ್ತ್ರೇಣ ದದಾಹರಾಘವಃ ॥೨॥

ತತಃ=ಅನಂತರ ರಾಘವಃ=ರಘುರಾಮನು ಸಮಾಗತ್ಯ=ಬಂದು ಪದೋಃಪತಂತಂ=ಪಾದಗಳಲ್ಲಿ ಬಿದ್ದಂತಹ ವಿಭೀಷಣಂ=ವಿಭೀಷಣನಿಗೆ ದ್ರಾಕ್=ತತ್‌ಕ್ಷಣವೆ ರಾಜ್ಯೇ=ಲಂಕಾ ರಾಜ್ಯದಲ್ಲಿ ಅಭಿಷಿಚ್ಯ=ಪಟ್ಟಾಭಿಷೇಕ ಮಾಡಿದನು. ನಿಜಾರ್ಥನಾಂ=ತನ್ನ ಪ್ರಾರ್ಥನೆಯನ್ನೂ ಉಪೇಕ್ಷಮಾಣಂ=ಲಕ್ಷಿಸದೆ ಇದ್ದ ಜಲಧಿಂ=ಸಮುದ್ರವನ್ನು ಧನಂಜಯಾಸ್ತ್ರೇಣ=ಐಂದ್ರಾಸ್ತ್ರದಿಂದ ದದಾಹ=ದಹಿಸಿದನು.

ಅನಂತರ ರಘುರಾಮನು ಬಂದು ಕಾಲಿಗೆ ಬಿದ್ದಂತಹ ವಿಭೀಷಣನನ್ನು ತತ್‌ಕ್ಷಣವೇ

ಲಂಕಾರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿದನು. ತನ್ನ ಪ್ರಾರ್ಥನೆಯನ್ನು ಲಕ್ಷಿಸದೇ ಇದ್ದ ಸಮುದ್ರವನ್ನು ಬಂದ್ರಾಸ್ತ್ರದಿಂದ ದಹಿಸಿದನು.

ಪಾದಯೋಃಪತಿತೇನಾಥ ಸಿಂಧುನಾದರ್ಶಿತೇಸ್ಥಲೇ

ಕಪಿವೀರಾಹೃತೈಃ ಶೈಲೈರ್ನಲೇನಸೇತು ಮಚೀಕರತ್ ೩.॥

ಅಥ=ಅನಂತರ ಪಾದಯೋಃ=ಪಾದಗಳಲ್ಲಿ ಪತಿತೇನ=ಬಿದ್ದಂತಹ ಸಿಂಧುನಾ=ಸಮುದ್ರ ರಾಜನಿಂದ ದರ್ಶಿತೇ=ತೋರಿಸಲ್ಪಟ್ಟ ಸ್ಥಲೇ=ಜಾಗದಲ್ಲಿ ಕಪಿವೀರಾಹೃತೈಶ್ಶೈಲೈಃ=ವಾನರ ವೀರರುಗಳಿಂದ ತರಲ್ಪಟ್ಟ ಬಂಡೆಗಳಿಂದ ನಲಂ=ನಲನೆಂಬ ವಾನರನ ಮೂಲಕ ಸೇತುಂ=ಸೇತುವೆಯನ್ನು ಅಚೀಕರತ್=ಕಟ್ಟಿಸಿದನು.

ಅನಂತರ ಪಾದಗಳಲ್ಲಿ ಬಿದ್ದ, ಸಮುದ್ರ ರಾಜನಿಂದ ನಿರ್ದೇಶಿಸಲ್ಪಟ್ಟ, ಸ್ಥಳದಲ್ಲಿ ಕಪಿವೀರರಿಂದ ತರಲ್ಪಟ್ಟ ಬಂಡೆಗಳಿಂದ ನಳನೆಂಬ ವಾನರನ ಮೂಲಕ ಸೇತುವೆಯನ್ನು ಕಟ್ಟಿಸಿದನು.

ಗದ್ಯ ॥ ಅಥ ವಿಲಂಘಿತ ಸಾಗರಸ್ಯ ಪ್ರವಿಷ್ಟ ಸುವೇಲಾಚಲಸ್ಯ

ವಲೀಮುಖಗಣಸ್ಯ ಪರಿಮಾಣಮವಗಂತುಂ ಆಗತಾಭ್ಯಾಂ

ಕಪಿವರ ಸಂದಾನಿತಪ್ರಸೃತಮೂರ್ಛಿತಾಭ್ಯಾಂ, ದಯಾಪರಧಿನಾ

ದಾಶರಥಿನಾ ವಿಮೋಚಿತಾಭ್ಯಾಂ, ಶುಕಸಾರಣಾಭ್ಯಾಂ,

ವಿದಿತ ನಿಖಿಲ ವೃತ್ತಾಂತೋ ದಶಾನನೋ ವಿದ್ಯುಜ್ಜಿಹ್ವ

ಮುಪಹ್ವರೇ ಕಿಮಪಿ ಅಕಥಯತ್ ॥

ಅಥ=ನಂತರ ವಿಲಂಘಿತಸಾಗರಸ್ಯ=ದಾಟಲ್ಪಟ್ಟ ಸಮುದ್ರವುಳ್ಳವರಾಗಿ ಪ್ರವಿಷ್ಟ ಸುವೇಲಾಚಲಸ್ಯ=ಸುವೇಲಾ ಚಲವನ್ನು ಪ್ರವೇಶಿಸಿದ ವಲೀಮುಖಗಣಸ್ಯ=ವಾನರ ಸೈನ್ಯದ ಪರಿಮಾಣಂ=ಪರಿಮಿತಿಯನ್ನು ಅವಗಂತುಂ=ತಿಳಿಯಲು ಆಗತಾಭ್ಯಾಂ=ಬಂದ ಕಪಿವರಸಂದಾನಿತ ಪ್ರಸೃತಮೂರ್ಛಿತಾಭ್ಯಾಂ=ಕಪಿಗಳಿಂದ ಹಿಡಿಯಲ್ಪಟ್ಟು ಮೂರ್ಛಿತಗೊಂಡಂತಹ ದಯಾಪರಧಿನಾ= ದಯೆಯ ಸಮುದ್ರದಂತಿದ್ದ ದಾಶರಥಿನಾ=ದಶರಥ ಕುಮಾರನಿಂದ ವಿಮೋಚಿತಾಭ್ಯಾಂ= ವಿಮೋಚನೆ ಹೊಂದಲ್ಪಟ್ಟ ಶುಕಸಾರಣಾಭ್ಯಾಂ=ಶುಕ ಮತ್ತು ಸಾರಣರೆಂಬುವರಿಂದ ವಿದಿತ=ತಿಳಿಯಲ್ಪಟ್ಟ ನಿಖಿಲ ವೃತ್ತಾಂತಃ=ಎಲ್ಲಾ ಸಮಾಚಾರಗಳನ್ನುಳ್ಳ ದಶಾನನಃ=ರಾವಣನು ವಿದ್ಯುಜ್ಜಿಹ್ವಂ=ವಿದ್ಯುಜ್ಜಿಹ್ವನೆಂಬ ಹೆಸರಿನ ರಾಕ್ಷಸನಿಗೆ ಉಪಹ್ವರೇ= ರಹಸ್ಯವಾಗಿ ಏನನ್ನೋ ಅಕಥಯತ್=ಹೇಳಿದನು.

ನಂತರ ದಾಟಲ್ಪಟ್ಟ ಸಮುದ್ರವುಳ್ಳವರಾಗಿ, ಸುವೇಲಾಚಲವೆಂಬ ಬೆಟ್ಟವನ್ನು ಪ್ರವೇಶಿಸಿದ ವಾನರ ಸೈನ್ಯದ ಪರಿಮಿತಿಯನ್ನು ತಿಳಿಯಲೋಸುಗ ಬಂದ ಕಪಿಗಳಿಂದ ಬಂಧಿಸಲ್ಪಟ್ಟು ಮೂರ್ಛೆಗೊಂಡಂತಹ ಮತ್ತು ದಯೆಯ ಸಮುದ್ರದಂತಿದ್ದ ದಾಶರಥಿಯಿಂದ ಬಿಡಿಸಲ್ಪಟ್ಟ ಶುಕ ಮತ್ತು ಸಾರಣರೆಂಬುವರಿಂದ ತಿಳಿಯಲ್ಪಟ್ಟ ಸಮಸ್ತ ವೃತ್ತಾಂತವುಳ್ಳ ದಶಾನನನು ವಿದ್ಯುಜ್ಜಿಹ್ವನೆಂಬ ರಾಕ್ಷಸನಿಗೆ ರಹಸ್ಯವಾಗಿ ಏನನ್ನೋ ಹೇಳಿದನು.

ಮಾಯಾವಿನಾ ಶಿರಃ ಪುರೋವಿನ್ಯಸ್ತಂ

ನಿರೀಕ್ಷ್ಯಾಪ್ಯ ಸೀತಾ ಶರಾಸನಂ

ಮುಮೂರ್ಛ ಸೀತಾ ಸರಮಾ ವಿಭೀಷಣ
ಪ್ರಿಯಾ ಸಮಾಶ್ವಾಸಯದಾಪ್ತಭಾಷಣೈಃ ॥೯॥

ಮಾಯಾವಿನಾ=ಮಾಯಾವಿಯಾದ ತೇನ=ಆ ವಿದ್ಯುಜ್ಜಿಹ್ವನಿಂದ ಪುರಃ=ತನ್ನ ಮುಂದೆ ವಿನಿರ್ಮಿತಂ=ಸೃಷ್ಟಿಸಲ್ಪಟ್ಟ ಭರ್ತುಃ=ಗಂಡನಾದ ರಾಮಚಂದ್ರನ ಸಶಿರ ಶರಾಸನಂ=ತಲೆಯಿಂದ ಕೂಡಿದ ಬಿಲ್ಲನ್ನು ನಿರೀಕ್ಷ್ಯ=ನೋಡಿ ಸೀತಾ=ಸೀತೆಯು ಮುಮೂರ್ಛ=ಮೂರ್ಛೆಗೊಂಡಳು. ವಿಭೀಷಣ ಪ್ರಿಯಾ=ವಿಭೀಷಣನ ಹೆಂಡತಿಯಾದ ಸರಮಾ=ಸರಮೆ ಎನ್ನುವವಳು ಆಪ್ತ ಭಾಷಣೈಃ=ಹಿತವಾದ ಮಾತುಗಳಿಂದ ಸಮಾಶ್ವಾಸಯತ್=ಸಮಾಧಾನ ಮಾಡಿದಳು.

ಮಾಯಾವಿಯಾದ ವಿದ್ಯುಜ್ಜಿಹ್ವನಿಂದ ಸೃಷ್ಟಿಸಲ್ಪಟ್ಟ ಪತಿ ರಾಮಚಂದ್ರನ ಶಿರಸ್ಸಿನಿಂದ ಕೂಡಿದ ಬಿಲ್ಲನ್ನು ಕಂಡು ಸೀತೆಯು ಮೂರ್ಛೆಗೊಂಡಳು. ಆಗ ವಿಭೀಷಣನ ಪತ್ನಿ ಸರಮೆ ಎನ್ನುವವಳು ಹಿತವಾದ ಮಾತುಗಳಿಂದ ಅವಳನ್ನು ಸಮಾಧಾನಪಡಿಸಿದಳು.

ರಾಮಾಯಸೀತಾಂ ದಿಶ ರಾವಣೇತಿ
ಹಿತಂತತೋ ಬೋಧಯಿತಿಸ್ಮ ಮಾಲ್ಯವಾನ್
ರಕ್ಷೋಽಧಿಪಸ್ತಂ ಪರಿಹಾಸ್ಯಸೇನಾಂ
ರಣಾಯಸನ್ನಾಹವತೀಂಚಕಾರ ॥೧೦॥

ತತಃ=ಅನಂತರ ಮಾಲ್ಯವಾನ್=ಮಾಲ್ಯವಾನ್ ಎನ್ನುವವನು ಹೇ ರಾವಣ=ಎಲೈ ರಾವಣನೇ ಸೀತಾಂ=ಸೀತೆಯನ್ನು ರಾಮಾಯ=ರಾಮನಿಗೆ ದಿಶ=ಒಪ್ಪಿಸು ಇತಿ=ಹೀಗೆ ಹಿತಂ=ಒಳ್ಳೆಯದನ್ನು ಬೋಧಯಿತಿಸ್ಮ=ಬೋಧಿಸಿದನು. ರಕ್ಷೋಽಧಿಪಃ=ರಾಕ್ಷಸಾಧಿಪ ರಾವಣನು ತಂ=ಅವನನ್ನು ಪರಿಹಾಸ್ಯ=ಹಾಸ್ಯ ಮಾಡಿ ರಣಾಯ=ಯುದ್ಧಕ್ಕೆ ಸೇನಾಂ= ಸೈನ್ಯವನ್ನು ಸನ್ನಾಹವತೀಂಚಕಾರ=ಸಿದ್ಧ ಮಾಡಿದನು.

ಅನಂತರ ಮಾಲ್ಯವಾನ್ ಎಂಬುವನು "ಎಲೈ ರಾವಣನೇ! ಸೀತೆಯನ್ನು ರಾಮನಿಗೆ ಒಪ್ಪಿಸು" ಎಂದು ಒಳ್ಳೆಯದನ್ನು ಹೇಳಲು ರಾಕ್ಷಸರಾಜ ರಾವಣನು ಅವನನ್ನು ಅಣಕಿಸಿ ಯುದ್ಧಕ್ಕೆ ಸೈನ್ಯವನ್ನು ಅಣಿ ಮಾಡಿದನು.

ಪಶ್ಚಾದ್ವಾನರ ವಾಹಿನೀ ಪ್ರಮಥಿತಾರಕ್ಷೋಽಧಿಪಾಕ್ಷೌಹಿಣೀ
ಮಾಲೋಕ್ಯೇಂದ್ರ ಜಿದಾಶುಗಾನ್ ಪ್ರವಿಕಿರನ್ನಪ್ಯಂಗದೇನಾಹತಃ
ಲೀನೋವ್ಯೋಮನಿ ಮಾಯಯಾನ್ಯಪಸುತಾ ಬಧ್ವೋರಗಾಸ್ತ್ರೈಃಪುರೀಂ
ಗತ್ವಾತಾತಮತೋಷಯದ್ಘನರವಾಂ ದುರ್ವಾರ್ಣವೇs ಮದ್ಯಯತ್ ॥೧೧॥

ಇಂದ್ರಜಿತ್=ಇಂದ್ರಜಿತು ಎನ್ನುವವನು ಪಶ್ಚಾತ್=ನಂತರ ವಾನರವಾಹಿನೀಂ=ವಾನರ ಸೇನೆಯಿಂದ ಪ್ರಮಥಿತಾ=ನಾಶಗೊಳ್ಳಲ್ಪಟ್ಟ ರಕ್ಷೋಽಧಿಪ=ರಾವಣನ ಅಕ್ಷೌಹಿಣೀ=ಸೈನ್ಯವನ್ನು ಆಲೋಕ್ಯ=ನೋಡಿ ಆಶುಗಾನ್=ಬಾಣಗಳನ್ನು ಪ್ರವಿಕಿರನ್ ಅಪಿ=ವರ್ಷಿಸಿದರೂ ಸಹ ಅಂಗದೇನ=ಅಂಗದನಿಂದ ಆಹತಃಸನ್=ಗಾಯಗೊಳ್ಳಲ್ಪಟ್ಟವನಾಗಿ ಮಾಯಯಾ=ಮಾಯೆಯಿಂದ ವ್ಯೋಮನಿ=ಆಕಾಶದಲ್ಲಿ ಲೀನಃ=ಮರೆಯಾಗಿ ಉರಗಾಸ್ತ್ರೈಃ=ಸರ್ಪಾಸ್ತ್ರದಿಂದ

ನೃಪಸುತೌ=ರಾಜಕುಮಾರರಾದ ರಾಮಲಕ್ಷ್ಮಣರನ್ನು ಬಧ್ವಾ=ಕಟ್ಟಿಹಾಕಿ ಪುರೀಂ=ಲಂಕಾಪಟ್ಟಣಕ್ಕೆ ಗತ್ವಾ=ಹೋಗಿ ತಾತಂ=ತಂದೆಯನ್ನು ಅತೋಷಯತ್=ಸಂತೋಷಪಡಿಸಿದನು. ಜನಕಜಾಂ= ಸೀತೆಯನ್ನು ದುಃಖಾರ್ಣವೇ=ದುಃಖ ಸಮುದ್ರದಲ್ಲಿ ಅಮಜ್ಜಯತ್=ಮುಳುಗಿಸಿದನು.

ಇಂದ್ರಜಿತುವು ನಂತರ ವಾನರ ಸೇನೆಯಿಂದ ನಾಶಗೊಳಿಸಲ್ಪಟ್ಟ ರಾವಣ ಸೈನ್ಯವನ್ನು ಕಂಡು ಬಾಣಗಳನ್ನು ವರ್ಷಿಸಿದರೂ ಸಹ ಅಂಗದನಿಂದ ಗಾಯಗೊಳ್ಳಲ್ಪಟ್ಟು ಕಡೆಗೆ ಮಾಯೆಯಿಂದ ಆಕಾಶದಲ್ಲಿ ಮರೆದು ಸರ್ಪಾಸ್ತ್ರದಿಂದ ರಾಜಪುತ್ರರಾದ ರಾಮಲಕ್ಷ್ಮಣರನ್ನು ಕಟ್ಟಿ ಹಾಕಿ ಲಂಕೆಗೆ ಹಿಂತಿರುಗಿ ತಂದೆಯನ್ನು ಸಂತೋಷಪಡಿಸಿದನು ಮತ್ತು ಸೀತೆಯನ್ನು ದುಃಖ ಸಮುದ್ರದಲ್ಲಿ ಮುಳುಗಿಸಿದನು.

ಗದ್ಯ ॥ ಅಥ ಯದೃಚ್ಛಯಾ ಸಮಾಗತ ವಿನತಾಸುತ ಗರುದ್ವಾತ
ನಿರ್ಧೂತ ಪಾತಾಶನಾಸ್ತ್ರೌ ರಾಜಪುತ್ರೌ ಅವಲೋಕ್ಯ ಆಹವೋತ್ಸಾಹ
ವತ್ಸು ಕ್ರವ್ಯಾತ್ಸು ಹನೂಮದಂಗದ ಪ್ರಭೃತಿಭಿರ್ನಿಹತಾನ್
ಪ್ರಹಸ್ತಪ್ರಭೃತೀನ್ ವಾಹಿನೀಪತೀನವ ಕರ್ಣ್ಯ ರಥಾಧಿರೂಢೋ
ಜಗದ್ಭಯಂಕರಾಕಾರೇಣ ಸಾಕಮನೀಕಾಯ ಸಮಾಟೀಕತ ರಾವಣಃ ॥

ಅಥ=ಅನಂತರ ಯದೃಚ್ಛಯಾಸಮಾಗತ=ತನಗೆ ತಾನಾಗಿ ಬಂದ ವಿನತಾಸುತ=ವಿನತೆಯ ಮಗನಾದ ಗರುಡನ ಗರುತ್‌ವಾತನಿರ್ಧೂತ=ರೆಕ್ಕೆಗಳ ಗಾಳಿಯಿಂದ ನಿವಾರಿಸಲ್ಪಟ್ಟ ಪಾತಾಶನಾಸ್ತ್ರ=ಸರ್ಪಾಸ್ತ್ರದಿಂದ ಕೂಡಿದ ರಾಜಸುತೌ=ರಾಜಪುತ್ರರಿಬ್ಬರನ್ನು ಅವಲೋಕ್ಯ=ನೋಡಿ ಕ್ರವ್ಯಾತ್ಸು=ರಾಕ್ಷಸರುಗಳು ಆಹವೇ=ಯುದ್ಧದಲ್ಲಿ ಉತ್ಸಾಹವತ್ಸು=ಉತ್ಸಾಹಯುತರಾಗಿದ್ದ ಸಂದರ್ಭದಲ್ಲಿ ಹನೂಮದಂಗದ ಪ್ರಭೃತಿಭಿಃ=ಹನುಮಂತ, ಅಂಗದ ಮುಂತಾದವರಿಂದ ಪ್ರಹಸ್ತಪ್ರಭೃತೀನ್=ಪ್ರಹಸ್ತ ಮುಂತಾದ ವಾಹಿನೀಪತೀನ್=ಸೇನಾಪತಿಗಳು ನಿಹತಾನ್ ಇತಿ=ಕೊಲ್ಲಲ್ಪಟ್ಟರು ಎಂಬುದಾಗಿ ಅವಕರ್ಣ್ಯ=ಕೇಳಿ ರಾವಣಃ=ರಾವಣನು ರಥಾಧಿರೂಢಃ=ರಥವನ್ನು ಹತ್ತಿಕೊಂಡು ಜಗದ್ಭಯಂಕರೇಣ=ಪ್ರಪಂಚದಲ್ಲೇ ಭಯವನ್ನು ಉಂಟುಮಾಡುವ ಆಕಾರೇಣಸಾಕಂ=ಆಕೃತಿಯಿಂದ ಕೂಡಿ ಅನೀಕಾಯ=ಯುದ್ಧಕ್ಕೆ ಸಮಾಟೀಕತ=ಹೊರಟನು.

ಅನಂತರ ತನಗೆ ತಾನೇ ಬಂದ ವಿನತಾಸುತನ ರೆಕ್ಕೆಗಳ ಗಾಳಿಯಿಂದ ನಿವಾರಿಸಲ್ಪಟ್ಟ ಸರ್ಪಾಸ್ತ್ರದಿಂದ ಕೂಡಿದ ರಾಜಪುತ್ರ ರಾಮಲಕ್ಷ್ಮಣರಿಬ್ಬರನ್ನು ನೋಡಿ ರಾಕ್ಷಸರುಗಳು ಯುದ್ಧದಲ್ಲಿ ಉತ್ಸಾಹ ತೋರುತ್ತಿದ್ದಾಗ ಹನುಮಂತ, ಅಂಗದ ಮುಂತಾದವರಿಂದ ಪ್ರಹಸ್ತ ಮುಂತಾದ ಸೇನಾಪತಿಗಳು ಹತರಾದ ಸಮಾಚಾರವನ್ನು ಕೇಳಿದ ರಾವಣನು ರಥಾಧಿರೂಢನಾಗಿ ಪ್ರಪಂಚಕ್ಕೆ ಭಯವನ್ನುಂಟುಮಾಡುವ ಆಕೃತಿಯಿಂದೊಡಗೂಡಿ ಯುದ್ಧಕ್ಕೆ ಹೊರಟನು.

ಸಾಲಾನ್ಗಿರೀನ್ವೃಕ್ಷಮುದಸ್ತಿಂ ಕಪಿವೀರಸೇನಾ
ಮುಕ್ತಾರ್ಯ ಬಾಣನಿವಹೈಃ ಭುವಿ ಲಕ್ಷ್ಮಣಂ ಸಃ
ಶಕ್ತ್ಯಾ ನಿಪಾತ್ಯ ರಘುನಾಯಕಸಾಯಕೌಘೈಃ
ತ್ರಾಣಾವಶೇಷಿತ ತನುರ್ನಗರೀಂಮುಧಾವ ॥೭॥

ಸಃ=ಅವನು ಸಾಲಾನ್=ಸಾಲವೃಕ್ಷಗಳನ್ನೂ ಗಿರೀಂಶ್ಚ=ಗಿರಿಗಳನ್ನೂ ಸಹ ಸುದತೀಂ= ಎಸೆಯುತ್ತಿರುವ ಕಪಿವೀರಸೇನಾಂ=ಕಪಿವೀರರ ಸೈನ್ಯವನ್ನು ಬಾಣನಿವಹೈಃ=ಬಾಣಗಳ ಸಮೂಹದಿಂದ ಉತ್ಸಾರ್ಯ=ನಿವಾರಿಸಿಕೊಂಡು ಭುವಿ=ಭೂಮಿಯಲ್ಲಿ ಲಕ್ಷ್ಮಣಂ= ಲಕ್ಷ್ಮಣನನ್ನು ಶಕ್ತ್ಯಾ=ಶಕ್ತ್ಯಾಯುಧದಿಂದ ನಿಪಾತ್ಯ=ಬೀಳಿಸಿ ರಘುನಾಯಕಸಾಯಕೌಘೈಃ =ರಾಮನ ಬಾಣಗಳ ಜಾಲದಿಂದ ಪ್ರಾಣಾವಶೇಷಿತತನುಃ=ಉಸಿರು ಮಾತ್ರ ಉಳಿಯಲ್ಪಟ್ಟ ಶರೀರ(ವುಳ್ಳವನಾಗಿ)ದಿಂದ ನಗರೀಂ=ಲಂಕಾಪಟ್ಟಣಕ್ಕೆ ದುಧಾವ=ಓಡಿದನು.

ಅವನು ಸಾಲವೃಕ್ಷ ಮತ್ತು ಗಿರಿಗಳನ್ನು ಸತತವಾಗಿ ವರ್ಷಿಸುತ್ತಿರುವ ಕಪಿವೀರರ ಸೈನ್ಯವನ್ನು ತನ್ನ ಬಾಣ ಸಂಕುಲಗಳಿಂದ ನಿವಾರಿಸಿಕೊಂಡು, ಭೂಮಿಯಲ್ಲಿ ಲಕ್ಷ್ಮಣನನ್ನು ಶಕ್ತ್ಯಾಯುಧದಿಂದ ಬೀಳುವಂತೆ ಮಾಡಿ, ರಾಮನ ಬಾಣಗಳ ಸಮೂಹದಲ್ಲಿ ಸಿಕ್ಕಿ, ಉಸಿರು ಮಾತ್ರ ಉಳಿಯಲ್ಪಟ್ಟ ಶರೀರದಿಂದ ಲಂಕೆಗೆ ಓಡಿಹೋದನು.

ಕುಂಭಕರ್ಣ ಮಥಜನ್ಯಭೂಗತಂ
ಭಕ್ಷಯಂತಮಖಿಲಾನ್ ವಲೀಮುಖಾನ್
ಭೂಸುತಾಪತಿರಸೂದಯತ್ತತಃ
ಪುಷ್ಪವೃಷ್ಟಿ ಮಕರೋತ್ಸುರವ್ರಜಃ ॥೮॥

ಅಥ=ಅನಂತರ ಆಜನ್ಯಭೂ=ಯುದ್ಧಭೂಮಿಗೆ ಗತಂ=ಬಂದು ಅಖಿಲಾನ್=ಎಲ್ಲಾ ವಲೀಮುಖಾನ್=ವಾನರರನ್ನು ಭಕ್ಷಯಂತಂ=ತಿನ್ನುವಂತಹ ಕುಂಭಕರ್ಣಂ=ಕುಂಭಕರ್ಣನನ್ನು ಭೂಸುತಾಪತಿಃ=ಸೀತಾಪತಿಯು ಅಸೂದಯತ್=ಕೊಂದು ಹಾಕಿದನು. ತತಃ=ಆಗ ಸುರವ್ರಜಃ =ದೇವತೆಗಳ ಸಮೂಹವು ಪುಷ್ಪವೃಷ್ಟಿಂ=ಹೂಮಳೆಯನ್ನು ಅಕರೋತ್=ಮಾಡಿತು.

ನಂತರ ಯುದ್ಧಭೂಮಿಗೆ ಬಂದು ಎಲ್ಲಾ ವಾನರರನ್ನೂ ತಿನ್ನುವಂತಹ ಕುಂಭಕರ್ಣನನ್ನು ಸೀತಾಪತಿಯಾದ ರಾಮನು ಸಂಹರಿಸಿದನು. ಆಗ ದೇವತೆಗಳ ಸಮೂಹವು ಪುಷ್ಪವೃಷ್ಟಿಯನ್ನು ಮಾಡಿತು.

ಗದ್ಯ ॥ ಸುರಾಂತಕ ನರಾಂತಕ ಪ್ರಭೃತಿ ರಾಕ್ಷಸಾನೀಕನೀ
ಪತಿಷ್ವನಿಲ ಪಾಕಶಾಸನಿಸುತಾದಿಭಿಸ್ಸಂಯುಗೇ, ಹತೇಷು
ಪುರುಹೂತಜಿದ್ಧನು ಮದೃಕ್ಷಸೇನಾಪತೀನ್ ವಿಹಾಯ
ಸಹ ರಾಮಲಕ್ಷ್ಮಣ ಮಮೂರ್ಛಯದ್ವಾಹಿನೀಂ ॥

ಸಂಯುಗೇ=ಯುದ್ಧದಲ್ಲಿ ಅನಿಲಪಾಕಶಾಸನಿಸುತಾದಿಭಿಃ=ವಾಯು ಮತ್ತು ಇಂದ್ರನ ಮಗ ಇವರುಗಳ ಮಕ್ಕಳುಗಳಾದ ಹನುಮಂತ ಮತ್ತು ಅಂಗದ ಅವರಿಂದ ಸುರಾಂತಕನರಾಂತಕ ಪ್ರಭೃತಿಃ=ಸುರಾಂತಕ ನರಾಂತಕ ಮುಂತಾದ ರಾಕ್ಷಸಾನೀಕನೀಪತಿಷು=ರಾಕ್ಷಸ ಸೇನಾಪತಿಗಳು ಹತೇಷು=ಕೊಲ್ಲಲ್ಪಡಲು ಪುರಹೂತಜಿತ್=ಇಂದ್ರಜಿತ್ತು ಹನೂಮಾದ್‌ಋಕ್ಷಸೇನಾಪತೀನ್ ವಿಹಾಯ=ಹನುಮಂತ, ಜಾಂಬವಂತ ಇವರನ್ನು ಬಿಟ್ಟು ಸಹ ರಾಮಲಕ್ಷ್ಮಣಂ=ರಾಮಲಕ್ಷ್ಮಣ ಸಹಿತವಾಗಿ ವಾಹಿನೀಂ=ಸೈನ್ಯವನ್ನು ಅಮೂರ್ಛಯತ್=ಮೂರ್ಛೆಗೊಳ್ಳುವಂತೆ ಮಾಡಿದನು.

ಯುದ್ಧದಲ್ಲಿ ಹನುಮಂತ ಮತ್ತು ಇಂದ್ರಪುತ್ರನ ಮಗನಾದ ಅಂಗದ ಇವರಿಬ್ಬರಿಂದ ಸುರಾಂತಕ ನರಾಂತಕ ಮೊದಲಾದ ಸೇನಾಪತಿಗಳು ಕೊಲ್ಲಲ್ಪಡಲು ಇಂದ್ರಜಿತ್ ಹನುಮಂತ

ಮತ್ತು ಜಾಂಬವಂತ ಇವರಿಬ್ಬರನ್ನು ಬಿಟ್ಟು ರಾಮಲಕ್ಷ್ಮಣರ ಸಹಿತವಾಗಿ ವಾನರಸೈನ್ಯವನ್ನೆಲ್ಲಾ ಮೂರ್ಛೆಗೊಳ್ಳುವಂತೆ ಮಾಡಿದನು.

ಋಕ್ಷಾಧಿಪನಿಯೋಗೇನ ವೇಗೇನ ಪವನಾತ್ಮಜಃ
ಸಂಜೀವಿನಿಲತಾಧಾರಮಾನಯಾಮಾಸಭೂಧರಂ ||೯||

ಪವನಾತ್ಮಜಃ=ಹನುಮಂತನು ಋಕ್ಷಾಧಿಪನಿಯೋಗೇನ=ಜಾಂಬವಂತನ ಯೋಚನೆಯಂತೆ ವೇಗೇನ=ಬೇಗನೆ ಸಂಜೀವಿನೀ ಲತಾ ಆಧಾರಂ=ಸಂಜೀವಿನಿ ಎನ್ನುವ ಮೂಲಿಕೆ ಇರುವ ಭೂಧರಂ=ಬೆಟ್ಟವನ್ನು ಆನಯಾಮಾಸ=ತೆಗೆದುಕೊಂಡು ಬಂದನು.

ಹನುಮಂತನು ಕರಡಿಯ ಅಧಿಪತಿ ಜಾಂಬವಂತನ ಸಲಹೆಯಂತೆ ಬೇಗನೆ ಸಂಜೀವಿನಿ ಎನ್ನುವ ಮೂಲಿಕೆ ಇರುವ ಬೆಟ್ಟವನ್ನು ತೆಗೆದುಕೊಂಡು ಬಂದನು.

ಸಂಜೀವಿನಿ ಗಿರಿಸಮೀರ ಸಮುಚ್ಛ್ವಸದ್ಭಿಃ
ಶಾಖಾಮೃಗೈಃ ಕಲುಷಿತಾ ನಗರೀಂವಿಹಾಯ
ಯುದ್ಧಾಯಸಂಗತವತೋಮಕರಾಕ್ಷಕುಂಭ
ಪೂರ್ವಾನ್ ರಘೂತ್ತಮ ಕಪೀಶ ಮುಖಾನಿಜಘ್ನುಃ ||೧೦||

ಸಂಜೀವಿನಿಗಿರಿ ಸಮೀರ ಸಮುಚ್ಛ್ವಸದ್ಭಿಃ=ಸಂಜೀವಿನೀ ಬೆಟ್ಟದ ಗಾಳಿಯಿಂದ ಪುನಃ ಉಚ್ಛ್ವಾಸವನ್ನು ಹೊಂದಿದ ಶಾಖಾಮೃಗೈಃ=ವಾನರರಿಂದ ಕಲುಷಿತಾಂ= ನಾಶ ಹೊಂದಲ್ಪಟ್ಟ ನಗರೀಂ=ಪಟ್ಟಣವನ್ನು ವಿಹಾಯ=ಬಿಟ್ಟು ಯುದ್ಧಾಯ=ಯುದ್ಧಕ್ಕೆ ಸಂಗತವತಃ=ಬಂದು ಸೇರಿದ ಮಕರಾಕ್ಷ ಕುಂಭಪೂರ್ವಾನ್=ಮಕರಾಕ್ಷ, ಕುಂಭ ಮುಂತಾದವರನ್ನು ರಘೂತ್ತಮ ಕಪೀಶ ಮುಖಾಃ=ರಾಮ, ಕಪಿಗಳ ಯಜಮಾನನಾದ ಸುಗ್ರೀವ ಮುಂತಾದವರು ನಿಜಘ್ನುಃ= ಸಂಹರಿಸಿದರು.

ಸಂಜೀವಿನಿ ಗಿರಿಯ ಗಾಳಿಯಿಂದಲೇ ಪುನಃ ಶ್ವಾಸೋಚ್ಛ್ವಾಸ ಹೊಂದಿದವರಾದಂತಹ, ವಾನರರಿಂದ ನಾಶ ಹೊಂದಲ್ಪಟ್ಟ ಲಂಕಾಪಟ್ಟಣವನ್ನು ಬಿಟ್ಟು ಯುದ್ಧಕ್ಕೆ ಬಂದ ಮಕರಾಕ್ಷ, ಕುಂಭ ಮುಂತಾದವರನ್ನು ರಾಮ, ಕಪೀಶನಾದ ಸುಗ್ರೀವ ಮುಂತಾದವರು ಸಂಹರಿಸಿದರು.

ಪುನರ್ದಶಮುಖಾತ್ಮಜೋ ಗಗನಲೀನ ವಿವಾಶುಗಾನ್
ಪ್ರವೃಷ್ಯ ಭರತಾಗ್ರಜ ಕ್ರುಧಮವೇತ್ಯಲಂಕಾಂಗತಃ
ಪ್ರತೀಚಿಪುರ ತೋರಣೇ ಹನೂಮತಃಪುರಃಪಶ್ಯತ
ಶ್ಚಕರ್ತಜನಕಾತ್ಮಜಾಂ ಕೃಪಣಕೇನ ಮಾಯಾಮಯೀಂ ||೧೧||

ಪುನಃ=ಮತ್ತೆ ದಶಮುಖಾತ್ಮಜಃ=ರಾವಣಕುಮಾರನಾದ ಇಂದ್ರಜಿತ್ ಗಗನಲೀನವಿವಸನ್=ಆಕಾಶದಲ್ಲಿ ಮರೆಯಾಗಿದ್ದುಕೊಂಡೇ ಆಶುಗಾನ್=ಬಾಣಗಳನ್ನು ಪ್ರವೃಷ್ಯ= ಸುರಿಸಿ ಭರತಾಗ್ರಜ ಕ್ರುಧಮವೇತ್ಯ=ಭರತ ಸೋದರನಾದ ರಾಮನ ಕೋಪವನ್ನು ತಿಳಿದು ಲಂಕಾಪ್ರತಿ=ಲಂಕೆಯನ್ನು ಕುರಿತು ಗತಃ=ಹೋದವನಾಗಿ ಪುರತಃ=ಪಟ್ಟಣದ ಪ್ರತೀಚಿ= ಪಶ್ಚಿಮದಲ್ಲಿ ರಣೇ=ಯುದ್ಧರಂಗದಲ್ಲಿ ಪಶ್ಯತಃ=ನೋಡಿಕೊಳ್ಳುತ್ತಿದ್ದ ಹನೂಮತಃ=ಹನು ಮಂತನ ಪುರಃ=ಮುಂದೆ ಮಾಯಾಮಯೀಂ ಜನಕಾತ್ಮಜಾಂ=ಮಾಯಾರೂಪದ ಸೀತೆ

ಯನ್ನು ಕೃಶಚಕೇನ=ಗರಗಸದಿಂದ ಚಿಚರ್ತ=ಕೊಯ್ದನು.

ಮತ್ತೆ ರಾವಣಕುಮಾರನಾದ ಇಂದ್ರಜಿತ್ ಆಕಾಶದಲ್ಲಿ ಮರೆಯಾಗಿ ಇದ್ದುಕೊಂಡು ಬಾಣಗಳನ್ನು ವರ್ಷಿಸಿ ಭರತನ ಸಹೋದರನಾದ ರಾಮಚಂದ್ರನ ಕೋಪವನ್ನು ಅರಿತವನಾಗಿ ಲಂಕೆಗೆ ಹೋಗಿ ಪಟ್ಟಣದ ಪಶ್ಚಿಮ ಭಾಗದಲ್ಲಿ ಯುದ್ಧರಂಗದಲ್ಲಿ ನೋಡಿಕೊಳ್ಳುತ್ತಿದ್ದ ಹನುಮಂತನ ಮುಂದೆ ಮಾಯಾರೂಪದ ಸೀತೆಯನ್ನು ಗರಗಸದಿಂದ ಕೊಯ್ದು ಹಾಕಿದನು.

ತಸ್ಮಿನ್ನಿರಾಶೇ ರಘುನಾಯಕಾಂತಿಕಂ
ಗಂತರ್ಯಯಂ ಪ್ರಾಪ್ಯನಿಕುಂಭಿಲಾಮಖಂ
ಆರಬ್ಧವಾನ್ ರಾಘವ ಲಕ್ಷ್ಮಣೌ ತತಃ
ಸೀತಾ ಶುಚಾತೀವತರಾಂ ವಿಶೇದತುಃ ॥೧೨॥

ತಸ್ಮಿನ್=ಆ ಹನುಮಂತನು ನಿರಾಶೇ=ನಿರಾಶೆಯಿಂದ ರಘುನಾಯಕ ಅಂತಿಕಂ=ರಘುರಾಮನ ಸಮೀಪಕ್ಕೆ ಗಂತಸತಿ=ಹೋಗುತ್ತಿದ್ದಾಗ ಅಯಂ=ಈ ಇಂದ್ರಜಿತ್ತು ನಿಕುಂಭಿಲಾಂ=ನಿಕುಂಭಿಲಾ ಎನ್ನುವ ಜಾಗವನ್ನು ಪ್ರಾಪ್ಯ=ಸೇರಿ ಮಖಂ=ಯಾಗವನ್ನು ಆರಬ್ಧವಾನ್=ಆರಂಭಿಸಿದನು. ತತಃ=ಅನಂತರ ರಾಘವ ಲಕ್ಷ್ಮಣೌ=ರಾಮಲಕ್ಷ್ಮಣರು ಸೀತಾಶುಚಾ=ಸೀತೆಯ ಮರಣದಿಂದುಟಾದ ದುಃಖದಿಂದ ಅತೀವತರಾಂ=ಬಹಳವಾಗಿ ವಿಶೇದತುಃ=ಶೋಕಿಸಿದರು.

ಆ ಹನುಮಂತನು ನಿರಾಶೆಯಿಂದ ರಘುರಾಮನ ಸಮೀಪಕ್ಕೆ ಹೋಗುತ್ತಿದ್ದಾಗ ಈ ಇಂದ್ರಜಿತ್ತು ನಿಕುಂಭಿಲಾ ಎನ್ನುವ ಜಾಗವನ್ನು ಸೇರಿ ಯಾಗವನ್ನು ಆರಂಭಿಸಿದನು. ಅನಂತರ ರಾಮಲಕ್ಷ್ಮಣರು ಸೀತೆಯ ಮರಣದಿಂದುಂಟಾದ ದುಃಖದಿಂದ ಬಹುವಾಗಿ ದುಃಖಿಸಿದರು.

ವಿಭೀಷಣಾಶ್ವಾಸಿತ ರಾಘವಾಜ್ಞಯಾ
ಗತ್ಯೈರ್ಹನೂಮತ್ಪ್ರಮುಖೈರ್ವಲೀಮುಖೈಃ
ವಿನಾಶಿತೇ ಕರ್ಮಣಿ ರೋಷಭೀಷಣಃ
ಸಮಾಗಮಚ್ಛಕ್ರಜಯೀರಣಾಂಗಣಂ ॥೧೩॥

ವಿಭೀಷಣಾಶ್ವಾಸಿತರಾಘವಾಜ್ಞಯಾ=ವಿಭೀಷಣನಿಂದ ಸಮಾಧಾನ ಮಾಡಲ್ಪಟ್ಟ ರಾಮನ ಆಜ್ಞೆಯಂತೆ ಗತ್ಯೈಃ=ಹೋದ ಹನೂಮತ್ಪ್ರಮುಖೈಃ=ಹನುಮಂತ ಮುಂತಾದ ವಲೀಮುಖೈಃ= ವಾನರರುಗಳಿಂದ ಕರ್ಮಣಿ=ಯಾಗಕರ್ಮವು ವಿನಾಶಿತೇ ಸತಿ=ನಾಶಮಾಡಲ್ಪಡಲು ರೋಷಭೀಷಣ= ಕೋಪದಿಂದ ಕೆರಳಿದ ಶಕ್ರಜಯಿಂ=ಇಂದ್ರಜಿತ್ತು ರಣಾಂಗಣಂ=ಯುದ್ಧರಂಗವನ್ನು ಸಮಾಗಮತ್=ಬಂದು ಸೇರಿದನು.

ವಿಭೀಷಣನಿಂದ ಸಮಾಧಾನ ಮಾಡಲ್ಪಟ್ಟ ರಘುರಾಮನ ಆಜ್ಞೆಯ ಪ್ರಕಾರ ಹನುಮಂತ ಮುಂತಾದ ಪ್ರಮುಖ ವಾನರರುಗಳಿಂದ ಯಾಗವು ನಾಶಹೊಂದಲ್ಪಡಲು ಕೋಪದಿಂದ ಕೆರಳಿದ ಇಂದ್ರಜಿತ್ತು ಯುದ್ಧರಂಗವನ್ನು ಬಂದು ಸೇರಿದನು.

ತಸ್ಯಂದನೋಽಸ್ಯತಪರೇ ಪವನಾತ್ಮಜಸ್ಯ
ಸ್ಕಂಧೇ ನಿವೇಶ್ಯ ವಿವಿಶಾಶ್ಚ ಶತ್ರೈರನೇಕಾನ್

ಸೌಮಿತ್ರಿರಚ್ಛಿನ್ನದಮುಷ್ಯ ಶಿರಃ ಶರೇಣ
ಪೌರಂದರೇಣ ವಿಬುಧಾಃ ಕುಸುಮಾನ್ಯವರ್ಷನ್ ॥೧೪॥

ಸೌಮಿತ್ರಿ=ಸುಮಿತ್ರಾನಂದನ ಲಕ್ಷ್ಮಣನು ತತ್=ಆ ಇಂದ್ರಜಿತುವಿನ ಸ್ಯಂದನೋನ್ನತತರೇ=ರಥಕ್ಕಿಂತಲೂ ಎತ್ತರವಾಗಿರುವಂತಹ ಪವನಾತ್ಮಜಸ್ಯ=ವಾಯುಪುತ್ರನಾದ ಹನುಮಂತನ ಸ್ಕಂಧೇ=ಹೆಗಲಿನ ಮೇಲೆ ನಿವೇಶ್ಯ=ಕುಳಿತುಕೊಂಡು ಅನೇಕಾನ್=ಬಹಳ ಶರಾನ್=ಬಾಣಗಳನ್ನು ವಿನಿಪಾತ್ಯ=ಬೀಳಿಸಿ ಪೌರಂದರೇಣ ಶರೇಣ=ಐಂದ್ರಾಸ್ತ್ರದಿಂದ ಅಮುಷ್ಯ= ಅವನ ಶಿರಃ=ತಲೆಯನ್ನು ಅಚ್ಛಿನತ್=ಕತ್ತರಿಸಿದನು ವಿಬುಧಾಃ=ದೇವತೆಗಳು ಕುಸುಮಾನಿ=ಪುಷ್ಪಗಳನ್ನು ಅವರ್ಷನ್=ಸುರಿಸಿದರು.

ಸುಮಿತ್ರಾನಂದನನಾದ ಲಕ್ಷ್ಮಣನು ಆ ಇಂದ್ರಜಿತುವಿನ ರಥಕ್ಕಿಂತಲೂ ಉನ್ನತವಾದಂತಹ ವಾಯುಪುತ್ರನ ಹೆಗಲ ಮೇಲೆ ಕುಳಿತು ಅನೇಕ ಬಾಣಗಳನ್ನು ವರ್ಷಿಸಿ ಕಡೆಗೆ ಐಂದ್ರಾಸ್ತ್ರದಿಂದ ಅವನ ತಲೆಯನ್ನು ಛೇದಿಸಿದನು. ದೇವತೆಗಳು ಪುಷ್ಪವೃಷ್ಟಿ ಮಾಡಿದರು.

ಶತ್ರಾರೌನಿಹತೇ ಸುತೇ ದಶಮುಖಃ ಶೋಕಾಬ್ಧಿಮಗ್ನಶ್ಚಿರಂ
ಪ್ರೇಯಸ್ಯಾಃ ಪ್ರತಿರೋಧ ಮಪ್ಯಗಣಯನ್ ಲೋಕೈಕ ವೀರಾಗ್ರಣೀಃ
ವಿಶ್ವಸ್ತಾ ಪರಿದೇವನಾ ರವ ವಿನಿರ್ಭಿನ್ನಾಖಿಲಾಶಾಂಚಲಾಂ
ಲಂಕಾಂ ಪ್ರೇಕ್ಷ್ಯ ರಣಾಂಗಣಂ ದ್ವಿಗುಣಿತಕ್ರೋಧಃ ಸಮಾಗಾತ್ ತತಃ ॥೧೫॥

ಶತ್ರಾರೌ=ಇಂದ್ರನ ಶತ್ರುವಾದ, ಸುತೇ=ಮಗನು ನಿಹತೇ ಸತಿ=ಕೊಲ್ಲಲ್ಪಟ್ಟಿದ್ದನ್ನು ಕೇಳಿ ಚಿರಂ=ದೀರ್ಘವಾಗಿ ಶೋಕಾಬ್ಧಿಮಗ್ನಃ=ದುಃಖಸಾಗರದಲ್ಲಿ ಮುಳುಗಿದ ಲೋಕೈಕ ವೀರಾಗ್ರಣೀಃ=ಪ್ರಪಂಚದಲ್ಲಿಯೇ ಒಬ್ಬನೇ ವೀರಾಗ್ರಣಿಯಾದ ದಶಮುಖಃ=ರಾವಣನು ಪ್ರೇಯಸ್ಯಾಃ= ಹೆಂಡತಿಯಾದ ಮಂಡೋದರಿಯ ಪ್ರತಿರೋಧಂ ಅಪಿ=ತಡೆಯುವಿಕೆಯನ್ನೂ ಸಹ ಅಗಣಯನ್=ಲಕ್ಷ್ಯಕ್ಕೆ ತಂದುಕೊಳ್ಳದೆ ವಿಶ್ವಸ್ತಾ ಪರಿದೇವನಾರವವಿನಿರ್ಭಿನ್ನಃ=ವಿಧವೆಯರ ರೋಧನ ಧ್ವನಿಯಿಂದ ತುಂಬಲ್ಪಟ್ಟ ಅಖಿಲಆಶಾಅಂಚಲಾಂ=ಎಲ್ಲಾ ದಿಕ್ಕುಗಳ ಅಂಚಿನಿಂದಲೂ ಕೂಡಿದ ಲಂಕಾಂ=ಲಂಕಾಪಟ್ಟಣವನ್ನು ಪ್ರೇಕ್ಷ್ಯ=ನೋಡಿ ತತಃ=ನಂತರ ದ್ವಿಗುಣಿತ ಕ್ರೋಧಃ ಸನ್= ದ್ವಿಗುಣಿತಗೊಂಡ ಕೋಪದಿಂದ ಕೂಡಿ ರಣಾಂಗಣಂ=ಯುದ್ಧರಂಗಕ್ಕೆ ಸಮಾಗಾತ್=ಬಂದನು.

ಇಂದ್ರಜಿತ್ ಎನ್ನುವ ಮಗನು ಕೊಲ್ಲಲ್ಪಟ್ಟಿದ್ದನ್ನು ಕೇಳಿ ದೀರ್ಘವಾಗಿ ಶೋಕಸಾಗರದಲ್ಲಿ ಮುಳುಗಿದ, ಲೋಕಕ್ಕೇ ಏಕೈಕ ವೀರಾಗ್ರಣಿ ಎನಿಸಿದ, ರಾವಣನು ಹೆಂಡತಿಯಾದ ಮಂಡೋದರಿಯ ಪ್ರತಿರೋಧವನ್ನೂ ಲೆಕ್ಕಿಸದೆ, ವಿಧವೆಯರ ರೋಧನ ಧ್ವನಿಯು ದಶದಿಕ್ಕುಗಳ ಅಂಚುಗಳಿಗೂ ವ್ಯಾಪಿಸಿರಲು, ಲಂಕಾಪಟ್ಟಣವನ್ನು ನೋಡಿ ದ್ವಿಗುಣಿತವಾದ ಕೋಪದಿಂದ ಕುದಿಯುತ್ತಾ ಯುದ್ಧರಂಗಕ್ಕೆ ಬಂದನು.

ಕೋಪಾತ್ ಕೃಪಾಣೇನ ವಿದಾರಯನ್ನಯಂ
ಬಭೂವ ಸೌಮಿತ್ರಿ ಪತ್ರೈರಸುಚ್ಛಿನ್
ಪ್ರಯುಜ್ಯ ತತ್ತ್ವಂ ಧನುಷ್ಯೈಕಧಿಪಾ
ಮಮೂರ್ಛಯಲ್ಲಕ್ಷ್ಮಣಮಿಂದ್ರಜಿದ್ವಿಷಂ ॥೧೬॥

ಕಪೀನ್=ವಾನರರನ್ನು ಕೃಶಾಣೇನ=ಕತ್ತಿಯಿಂದ ವಿದಾರಯನ್=ಕತ್ತರಿಸುತ್ತಾ ಅಯಂ= ಈ ರಾವಣನು ಸೌಮಿತ್ರಿ=ಸುಮಿತ್ರಾಕುಮಾರನಾದ ಲಕ್ಷ್ಮಣನ ಶರೈಃ=ಬಾಣಗಳಿಂದ ಅನುಚ್ಛ್ವಸನ್=ಶ್ವಾಸೋಚ್ಛ್ವಾಸವಿಲ್ಲದವನಾಗಿ ಬಭೂವ=ಆದನು. ಭುವನೈಕಭೀಷಣಾಂ=ಪ್ರಪಂಚದಲ್ಲೇ ಏಕೈಕವಾದ ಭಯಂಕರವಾದ ಶಕ್ತಿಂಪ್ರಯುಜ್ಯ=ಶಕ್ತ್ಯಾಯುಧವನ್ನು ಪ್ರಯೋಗಿಸಿ ಇಂದ್ರಜಿದ್ರಿಪುಂ=ಇಂದ್ರಜಿತ್ತಿಗೆ ಶತ್ರುವಾದ ಲಕ್ಷ್ಮಣನನ್ನು ಮಮೂರ್ಛ=ಮೂರ್ಛೆಗೊಳಿಸಿದನು.

ವಾನರರನ್ನು ಕತ್ತಿಯಿಂದ ಕತ್ತರಿಸುತ್ತಾ ರಾವಣನು ಸುಮಿತ್ರಾನಂದನ ಲಕ್ಷ್ಮಣನ ಬಾಣಗಳಿಂದ ಉಸಿರು ನಿಂತುಹೋದವನಂತೆ ಆಗಿ ಕಡೆಗೆ ಪ್ರಪಂಚದಲ್ಲೇ ಏಕೈಕ ಭಯಂಕರ ಅಸ್ತ್ರವಾದ ಶಕ್ತ್ಯಾಸ್ತ್ರವನ್ನು ಪ್ರಯೋಗಿಸಿ ಇಂದ್ರಜಿತ್ತಿನ ಶತ್ರುವಾದ ಲಕ್ಷ್ಮಣನನ್ನು ಮೂರ್ಛೆಗೊಳಿಸಿದನು.

ಸಂಜೀವಿನೀ ಮಾರುತ ಜೀವಿತಾನುಜಂ
ಸಮೀಕ್ಷ್ಯ ಹೃಷ್ಟೋ ರಘುವಂಶ ವರ್ಧನಃ
ಆಖಂಡಲ ಪ್ರೇಷಿತ ಮುಚ್ಚವಾಜಿನಂ
ಸಮಾರುರೋಹಾಥ ಸಮಾತಲಿಂರಥಂ ॥೧೭॥

ಸಂಜೀವಿನೀ ಮಾರುತ=ಸಂಜೀವಿನೀ ಗಿರಿಯ ಗಾಳಿಯಿಂದ ಜೀವಿತ=ಜೀವವನ್ನು ಹೊಂದಿದ ಅನುಜಂ=ತಮ್ಮನನ್ನು ಸಮೀಕ್ಷ್ಯ=ನೋಡಿ ಹೃಷ್ಟಃ=ಸಂತೋಷಗೊಂಡ ರಘುವಂಶವರ್ಧನಃ= ರಾಮನು ಅಥ=ನಂತರ ಆಖಂಡಲಪ್ರೇಷಿತಂ=ಇಂದ್ರನಿಂದ ಕಳುಹಿಸಲ್ಪಟ್ಟ ಉಚ್ಚವಾಜಿನಂ=ಉತ್ಕೃಷ್ಟವಾದ ಕುದುರೆಗಳಿಂದ ಕೂಡಿದ್ದೂ ಸಮಾತಲಿಂ=ಮಾತಲಿ ಎನ್ನುವ ಸಾರಥಿಯಿಂದ ಕೂಡಿದ್ದೂ ಆದ ರಥಂ=ರಥವನ್ನು ಸಮಾರುರೋಹ=ಹತ್ತಿದನು.

ಸಂಜೀವಿನೀ ಪರ್ವತದ ಗಾಳಿಯಿಂದ ಜೀವಂತನಾದ ತಮ್ಮನನ್ನು ಕಂಡು ಸಂತೋಷಿಸಿದ ರಾಮಚಂದ್ರನು ನಂತರ ಇಂದ್ರನಿಂದ ಕಳುಹಿಸಲ್ಪಟ್ಟ ಉತ್ಕೃಷ್ಟ ಕುದುರೆಗಳಿಂದಲೂ ಮಾತಲಿ ಎನ್ನುವ ಸಾರಥಿಯಿಂದಲೂ ಕೂಡಿದ ರಥವನ್ನು ಆರೋಹಿಸಿದನು.

ಗದ್ಯ ॥ಅಥ ದಶರಥತನಯ ದಶವದನಯೋಃ ವಾರುಣವಿನಿವಾರಿತ ವೈಶ್ವಾನರಂ,
ವೈನತೇಯ ಸಮುತ್ಸಾರಿತದಾಂದಶೂಕಂ, ವಾತಾಸ್ತ್ರ ವಿನಿರ್ಧೂತ ಜೈಮೂತಂ,
ವೈಕರ್ತನ ವಿನಿವರ್ತಿತ ತಾಮಿಸ್ರಂ, ವಾಸವನಿಷ್ಕಾಸಿತ ದಾನವಂ,
ವಾಸುದೇವ ಪ್ರಚಲಿತಾಯಿತ ವಾಮದೇವಂ, ಅಂಬರತಲ ನಿವಿಷ್ಟಸುರಮುನಿ
ಪ್ರಭೃತಿಭಿಃ ಅತ್ಯಾದರೇಣ ಅವಲೋಕ್ಯಮಾನ ಮಭೂದ
ಭೂತಪೂರ್ವ ಮಾಯೋಧನಂ

ಅಥ=ಅನಂತರ ದಶರಥತನಯ=ರಾಮ ದಶವದನಯೋಃ=ರಾವಣರಿಗೆ ವಾರುಣ ವಿನಿವಾರಿತವೈಶ್ವಾನರಂ=ವರುಣಾಸ್ತ್ರದಿಂದ ಹೋಗಲಾಡಿಸಿಕೊಂಡಂತಹ ಆಗ್ನೇಯಾಸ್ತ್ರದಿಂದಲೂ ವೈನತೇಯಸಮುತ್ಸಾರಿತದಾಂದಶೂಕಂ=ಗರುಡಾಸ್ತ್ರದಿಂದ ನಿವಾರಿಸಲ್ಪಟ್ಟ ಸರ್ಪಾಸ್ತ್ರದಿಂದಲೂ ವಾತಾಸ್ತ್ರವಿನಿರ್ಧೂತ ಜೈಮೂತಂ=ವಾಯುವ್ಯಾಸ್ತ್ರದಿಂದ ಚದುರಿಸಲ್ಪಟ್ಟಂತಹ ಮೇಘಾಸ್ತ್ರದಿಂದಲೂ ವೈಕರ್ತನ ವಿನಿವರ್ತಿತತಾಮಿಸ್ರಂ=ಸೂರ್ಯಾಸ್ತ್ರದಿಂದ ಪರಿಹರಿಸಲ್ಪಟ್ಟ

ಅಂಧಕಾಸ್ತ್ರದಿಂದಲೂ ವಾಸವನಿಶ್ಯಾಸಿತದಾನವಂ-ಐಂದ್ರಾಸ್ತ್ರದಿಂದ ಓಡಿಸಲ್ಪಟ್ಟ ದಾನವಾಸ್ತ್ರದಂತೆಯೂ ವಾಸುದೇವ ಪ್ರಚಲಿತಾಯಿತವಾಮದೇವಂ-ವಾಸುದೇವಾಸ್ತ್ರದಿಂದ ಹೋಗುವಂತೆ ಮಾಡಲ್ಪಟ್ಟ ಶೈವಾಸ್ತ್ರದಿಂದಲೂ ಅಂಬರತಲನಿವಿಷ್ಟ-ಆಕಾಶದಲ್ಲಿ ಇರುವ ಸುರಮುನಿಪ್ರಭೃತಿಭಿಃ-ದೇವ ಮತ್ತು ಋಷಿಗಳಿಂದ ಅತ್ಯಾದರೇಣ-ಅತಿಗೌರವ ಪ್ರೀತಿಗಳಿಂದ ಅವಲೋಕಮಾನಂ-ನೋಡುತ್ತಿರುವಂತಹ ಅಭೂತಪೂರ್ವ-ಹಿಂದಿಲ್ಲದಂತಹ ಆಯೋಧನಂ-ಯುದ್ಧವು ಅಭೂತ್-ನಡೆಯಿತು.

ಅನಂತರ ರಾಮರಾವಣರಿಗೆ ವಾರುಣಾಸ್ತ್ರದಿಂದ ನಿವಾರಿಸಲ್ಪಟ್ಟ ಆಗ್ನೇಯಾಸ್ತ್ರದಿಂದಲೂ, ಗರುಡನಿಂದ ಹೋಗಲಾಡಿಸಲ್ಪಟ್ಟ ಸರ್ಪಾಸ್ತ್ರದಿಂದಲೂ, ವಾಯುವ್ಯಾಸ್ತ್ರದಿಂದ ಚದುರಿಸಲ್ಪಟ್ಟಂತಹ ಮೇಘಾಸ್ತ್ರದಿಂದಲೂ, ಸೂರ್ಯಾಸ್ತ್ರದಿಂದ ದೂರವಾದಂತಹ ಅಂಧಕಾರಾಸ್ತ್ರದಿಂದಲೂ, ಐಂದ್ರಾಸ್ತ್ರದಿಂದ ಓಡಿಸಲ್ಪಟ್ಟ ದಾನವಾಸ್ತ್ರದಿಂದಲೂ, ವಾಸುದೇವನಿಂದ ಪರಿಹರಿಸಲ್ಪಟ್ಟ ಶೈವಾಸ್ತ್ರದಿಂದಲೂ ಕೂಡಿದ, ಆಕಾಶದಲ್ಲಿ ಸೇರಿದ ದೇವತೆ ಮತ್ತು ಋಷಿಗಳಿಂದ ಪ್ರೀತ್ಯಾದರಗಳಿಂದ ಅವಲೋಕಿಸುವಂತಹ, ಹಿಂದೆ ನಡೆಯದಂತಹ ಯುದ್ಧವು ನಡೆಯಿತು.

ಶಿರಸ್ಸು ಲೂನೇಷ್ವಪಿ ವೈರಿಣಸ್ತತಃ
ಪುನಃ ಪುನಃ ಕಂದಳಿತೇಷು ರಾಘವಃ
ವಿಧೇಃ ಪ್ರಯುಜ್ಯಾಸ್ತ್ರ ಮಥಜ್ವಲಚ್ಛಿಖಂ
ಜಘಾನ ತಂ ಲೋಕವಿರೋಧಿನಂ ರಣೇ ॥೧೮॥

ತತಃ-ನಂತರ ವೈರಿಣಃ-ವಿರೋಧಿಯಾದ ರಾವಣನ ಶಿರಸ್ಸು-ತಲೆಗಳು ಲೂನೇಷು ಅಪಿ-ಕತ್ತರಿಸಲ್ಪಟ್ಟರೂ ಸಹ ಪುನಃ ಪುನಃ-ಮತ್ತೆ ಮತ್ತೆ ಕಂದಳಿತೇಷು-ಚಿಗುರುತ್ತಿರಲು ರಾಘವಃ-ರಾಮನು ಅಥ-ನಂತರ ಜ್ವಲಚ್ಛಿಖಂ-ಜ್ವಲಿಸುತ್ತಿರುವ ಅಗ್ನಿಶಿಖಿಯಂತಿರುವ ವಿಧೇಃ ಅಸ್ತ್ರಂ-ಬ್ರಹ್ಮಾಸ್ತ್ರವನ್ನು ಪ್ರಯುಜ್ಯ-ಪ್ರಯೋಗಿಸಿ ಲೋಕವಿರೋಧಿನಂ-ಲೋಕ ವಿರೋಧಿಯಾಗಿದ್ದ ತಂ-ಆ ರಾವಣನನ್ನು ರಣೇ-ಯುದ್ಧದಲ್ಲಿ ಜಘಾನ-ಸಂಹರಿಸಿದನು.

ನಂತರ ವಿರೋಧಿಯಾದ ರಾವಣನ ತಲೆಗಳು ಕತ್ತರಿಸಲ್ಪಟ್ಟರೂ ಸಹ ಪುನಃಪುನಃ ಚಿಗುರುತ್ತಿರಲು ರಾಮನು ಜ್ವಲಿಸುತ್ತಿರುವ ಅಗ್ನಿಶಿಖಿಯಂತೆ ಮೆರೆಯುವ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿ ಲೋಕವಿರೋಧಿಯಾಗಿದ್ದ ರಾವಣನನ್ನು ಯುದ್ಧದಲ್ಲಿ ಸಂಹರಿಸಿದನು.

ತದಾವಿನೇದುಃ ಸುರಭೇರಿಕಾಭೃಶಂ
ಜಗುಃಕಲಂನಾಕಸದಾಂಕುಶೀಲವಾಃ
ಅನೃತ್ಯಮುತ್ಕಾರು ಸುರಾಂಗನಾಸ್ಸುರಾಃ
ರಘೂತ್ತಮಂ ಕಲ್ಪಸುಮೈರವಾಕಿರನ್ ॥೧೯॥

ತದಾ-ಆಗ ಸುರಭೇರಿಕಾ-ದೇವದುಂದುಭಿಗಳು ಭೃಶಂ-ಚೆನ್ನಾಗಿ ವಿನೇದುಃ -ಬಾರಿಸಲ್ಪಟ್ಟುವು. ನಾಕಸದಾಂ-ದೇವಸಭೆಯ ಕುಶೀಲವಾ-ಗಾಯಕರೆನಿಸಿದ ಗಂಧರ್ವರು ಕಲಂ-ಇಂಪಾಗಿ ಜಗುಃ-ಹಾಡಿದರು. ಸುರಾಂಗನಾಃ-ದೇವನರ್ತಕಿಯರು ಚಾರು-ಸೊಗಸಾಗಿ ಅನೃತ್ಯನ್-ನರ್ತಿಸಿದರು ಸುರಾಃ-ದೇವತೆಗಳು ಕಲ್ಪಸುಮೈಃ-ಕಲ್ಪವೃಕ್ಷದ ಹೂಗಳಿಂದ

ಅವಾಕಿರನ್=ವರ್ಷಿಸಿದರು.

ಆಗ ದೇವದುಂದುಭಿಗಳು ಚೆನ್ನಾಗಿ ಬಾರಿಸಲ್ಪಟ್ಟುವು; ದೇವ ಸಭೆಯ ಗಂಧರ್ವಗಾಯಕರು ಇಂಪಾಗಿ ಹಾಡಿದರು; ದೇವನರ್ತಕಿಯರು ಸೊಗಸಾಗಿ ನರ್ತಿಸಿದರು; ದೇವತೆಗಳು ಹೂಗಳಿಂದ ಮಳೆಗರೆದರು.

ತ್ರಿಲೋಕ ವಿಖ್ಯಾತ ಮಹಾಭುಜೇಽಪಿ
ರಿಪಾವಪಿಭ್ರಾತರಿ ರಾಕ್ಷಸಾಧಿಪೆ
ಕೃತಾತ್ಮನಿಂದೋ ವಿಲಲಾಪ ಮೂರ್ಛಿತೋ
ವಿಭೀಷಣೋ ಗದ್ಗದ ಭಾಷಣಸ್ತತಃ ॥೬೦॥

ರಿಪೌಅಪಿ=ಶತ್ರುವಾದರೂ ಕೂಡ ತ್ರಿಲೋಕವಿಖ್ಯಾತ ಮಹಾಭುಜೆ=ಮೂರು ಲೋಕಗಳಲ್ಲಿಯೂ ಪ್ರಸಿದ್ಧನಾದ ದೊಡ್ಡಭುಜಗಳಿಂದ ಕೂಡಿದ ಭ್ರಾತರಿ=ಸಹೋದರನಾದ ರಾಕ್ಷಸಾಧಿಪೆ=ರಾಕ್ಷಸರಾಜ ರಾವಣನು ಮೃತೆಸತಿ=ಗತಿಸಿದ ಸಂದರ್ಭದಲ್ಲಿ ವಿಭೀಷಣಃ =ವಿಭೀಷಣನು ಕೃತಾತ್ಮನಿಂದಃಸನ್=ತನ್ನನ್ನು ನಿಂದಿಸಿಕೊಂಡು ವಿಲಲಾಪ=ಪ್ರಲಾಪಿಸಿದನು. ತತಃ=ಆಗ ಗದ್ಗದ ಭಾಷಣಃಸನ್=ಗದ್ಗದ ಭಾಷಿತನಾಗಿ ಮೂರ್ಛಿತಃ=ಮೂರ್ಛೆಯನ್ನು ಹೊಂದಿದನು.

ಶತ್ರುವಾದರೂ ಕೂಡ ಮೂರು ಲೋಕಗಳಲ್ಲಿಯೂ ಪ್ರಸಿದ್ಧನಾದ ದೊಡ್ಡ ಭುಜಗಳಿಂದ ಕೂಡಿದ ಸಹೋದರನಾದ ರಾಕ್ಷಸರಾಜ ರಾವಣನು ಗತಿಸಿದ ಸಂದರ್ಭದಲ್ಲಿ ವಿಭೀಷಣನು ತನ್ನನ್ನು ನಿಂದಿಸಿಕೊಂಡು ಪ್ರಲಾಪಿಸಿದನು. ಆಗ ಆತನು ಗದ್ಗದ ಭಾಷಿತನಾಗಿ ಮೂರ್ಛೆ ಹೋದನು.

ಮಂಡೋದರೀ ಪ್ರಭೃತಯೋ ರಜನೀಚರಯೋಷಿತಃ
ವಿಲೇಪುಃ ಪತಿಪುತ್ರಾದೀನ್ ವಿಲೋಕ್ಯ ಗತಜೀವಿತಾನ್ ॥೬೧॥

ಮಂಡೋದರೀಪ್ರಭೃತಯಃ=ಮಂಡೋದರೀ ಮೊದಲಾದ ರಜನೀಚರಯೋಷಿತಃ= ರಾಕ್ಷಸ ಸ್ತ್ರೀಯರು ಗತಜೀವಿತಾನ್=ಸತ್ತುಹೋದ ಪತಿಪುತ್ರಾದೀನ್=ಗಂಡ ಮಗ ಮೊದಲಾದವರನ್ನು ವಿಲೋಕ್ಯ=ನೋಡಿ ವಿಲೇಪುಃ=ಅತ್ತರು.

ಮಂಡೋದರಿ ಮೊದಲಾದ ರಾಕ್ಷಸ ಸ್ತ್ರೀಯರು ಸತ್ತುಹೋದ ಗಂಡ, ಮಗ ಮೊದಲಾದವರನ್ನು ನೋಡಿ ಪ್ರಲಾಪಿಸಿದರು.

ಪರೇತ ವರ್ಗಾಯ ನಿವಾಪ ಪೂರ್ವಿಕಾ
ಕ್ರಿಯಾವಿತನ್ವಂತಮಮುಂವಿಭೀಷಣಂ
ವಿಧಾಯ ಲಂಕಾಧಿಪತಿಂ ಪ್ರವೇಶನಾತ್
ಪವಿತ್ರಿತಾಗ್ನಿರ್ಜಗೃಹೇಥ ಜಾನಕೀಂ ॥೬೨॥

ಪರೇತವರ್ಗಾಯ=ಸತ್ತು ಹೋದ ಬಂಧುವರ್ಗದವರಿಗೆಲ್ಲಾ ನಿವಾಪಪೂರ್ವಿಕಾಃ= ತರ್ಪಣ ಮುಂತಾದ ಕ್ರಿಯಾಃವಿತನ್ವಂತಂ=ಕ್ರಿಯೆಯನ್ನು ಮಾಡಿದ ಅಮುಂ=ಈ ವಿಭೀಷಣಂ=ವಿಭೀಷಣನನ್ನು ಲಂಕಾಧಿಪತಿಂ=ಲಂಕೆಗೆ ಅರಸನನ್ನಾಗಿ ವಿಧಾಯ=ಮಾಡಿ

ಅಥ=ನಂತರ ಪ್ರವೇಶನಾತ್=ಪ್ರವೇಶ ಮಾಡಲ್ಪಟ್ಟಿದ್ದರಿಂದ ಪವಿತ್ರಾಗ್ನಿಂ=ಪವಿತ್ರ ಮಾಡಲ್ಪಟ್ಟ ಅಗ್ನಿಯುಳ್ಳ, ಜಾನಕೀಂ=ಸೀತೆಯನ್ನು ಜಗೃಹೇ=ಸ್ವೀಕರಿಸಿದನು.

ಸತ್ತುಹೋದ ಬಂಧುವರ್ಗದವರಿಗೆಲ್ಲಾ ತರ್ಪಣಾದಿ ಕ್ರಿಯೆಗಳನ್ನು ಮಾಡಿದ ವಿಭೀಷಣನನ್ನು ಲಂಕೆಗೆ ಅರಸನನ್ನಾಗಿ ಮಾಡಿ ನಂತರ ಪ್ರವೇಶ ಮಾಡಲ್ಪಟ್ಟಿದ್ದರಿಂದ ಪವಿತ್ರಗೊಂಡ ಅಗ್ನಿಯುಳ್ಳ ಸೀತೆಯನ್ನು ಸ್ವೀಕರಿಸಿದನು.

ಸಹಪ್ಲವಂಗೈರಧಿರುಹ್ಯಪುಷ್ಪಕಂ
ವಿಮಾನ ಮುರ್ವೀಂತನಯಾಂ ಪ್ರತಿಪ್ರಭುಃ
ಸಮುದ್ರರೋಧಃ ಶಯನಾದಿಕಾಃ ಕಥಾ
ವದನ್ ಭರದ್ವಾಜ ತಪೋವನಂ ಯಯೌ ॥೭೩॥

ಪ್ರಭುಃ=ರಾಮನು ಪ್ಲವಂಗೈಸಹ=ವಾನರರ ಸಹಿತನಾಗಿ ಪುಷ್ಪಕ ವಿಮಾನಂ=ಪುಷ್ಪಕ ವಿಮಾನವನ್ನು ಅಧಿರುಹ್ಯ=ಏರಿ ಉರ್ವೀಂತನಯಾಂ=ಭೂಸುತೆಯಾದ ಸೀತೆಯನ್ನು ಕುರಿತು ಸಮುದ್ರ ರೋಧಃ=ಸಮುದ್ರತೀರದಲ್ಲಿ ಶಯನಾದಿಕಾಃ=ತಾನು ಮಲಗಿದ್ದೇ ಮೊದಲಾದ ಕಥಾಃ ವೃತ್ತಾಂತಗಳನ್ನು ವದನ್=ಹೇಳಿಕೊಂಡು ಭರದ್ವಾಜತಪೋವನಂ=ಭಾರದ್ವಾಜರ ಆಶ್ರಮವನ್ನು ಯಯೌ=ಸೇರಿದನು.

ಪ್ರಭುವಾದ ರಘುರಾಮನು ವಾನರರ ಸಹಿತವಾಗಿ ಪುಷ್ಪಕ ವಿಮಾನವನ್ನು ಏರಿ ಭೂಸುತೆಯಾದ ಸೀತೆಯನ್ನು ಕುರಿತು ಸಮುದ್ರ ತೀರದಲ್ಲಿ ತಾನು ಮಲಗಿದ್ದೇ ಮೊದಲಾದ ವೃತ್ತಾಂತವನ್ನು ಹೇಳಿಕೊಂಡು ಭರದ್ವಾಜರ ಆಶ್ರಮವನ್ನು ತಲಪಿದನು.

ತದಾತಿಥೇಯಂ ಪ್ರತಿಗೃಹ್ಯ ನಾಗರೈಃ
ಪ್ರಮೋದ ಮಾನೈರ್ಭರತಾಗ್ರಗಾಮಿಭಿಃ
ವಿಯುಕ್ತವತ್ಸಾಭಿನವ ಪ್ರಸೂತಿಕಾ
ಗವೀ ಸದೃಕ್ಷಾಭಿರಪಿ ಸ್ವಮಾತೃಭಿಃ ॥೭೪॥
ವಸಿಷ್ಠ ಪೂರ್ವೈರ್ಮುನಿಭಿರ್ನದೀಜಲ-
ಪ್ರಪೂರ್ಣ ಸೌವರ್ಣ ಘಟೀಕರೈರಪಿ
ಅಭಿಪ್ರಯಾತಃ ಪಟಹಾದಿ ನಾದಿತಂ
ವಿವೇಶಸಾಕೇತಪುರಂ ರಘೂದ್ವಹಃ ॥೭೫॥

ತದಾತಿಥೇಯಂ=ಆ ಭಾರದ್ವಾಜರ ಆತಿಥ್ಯವನ್ನು ಪ್ರತಿಗೃಹ್ಯ=ಸ್ವೀಕರಿಸಿ ಪ್ರಮೋದಮಾನೈಃ =ಸಂತೋಷಭರಿತರಾದ ಭರತ ಅಗ್ರಗಾಮಿಭಿಃ=ಭರತನಿಗೆ ಮುಂಚೆ ನಡೆಯುವವರಾದಂತಹ ನಾಗರೈಃ=ಪುರಜನರಿಂದಲೂ ವಿಯುಕ್ತವತ್ಸಾ=ಬಿಡಲ್ಪಟ್ಟ ಕರುಗಳಿಂದ ಅಭಿನವಪ್ರಸೂತಿಕಾ ಗವಿ ಸದೃಕ್ಷಾಭಿಃ=ಆಗತಾನೇ ಪ್ರಸವಿಸಿದ ಗೋವುಗಳಂತೆ ತೋರುವ ಸ್ವಮಾತೃಭಿಃಅಪಿ=ತನ್ನ ತಾಯಿಯರಿಂದಲೂ;

ನದೀ ಜಲಪ್ರಪೂರ್ಣಸೌವರ್ಣಘಟೀಕರೈರಪಿ=ನದಿಯ ಜಲವನ್ನು ತುಂಬಿದ ಸುವರ್ಣ ಕುಂಭಗಳನ್ನು ಹೊಂದಿದ ಕರಗಳಿಂದ ಕೂಡಿದ ವಸಿಷ್ಠ ಪೂರ್ವೈಃ=ವಸಿಷ್ಠರೇ ಮುಂತಾದ ಮುನಿಭಿಃ ಅಪಿ=ಮುನಿವರರುಗಳಿಂದ ಅಭಿಪ್ರಯಾತಃ=ಸ್ವಾಗತಿಸಲ್ಪಟ್ಟ ರಘೂದ್ವಹಃ=ರಘುರಾಮನು

ಘಟಹಾದಿನಾದಿತಂ=ವಾದ್ಯಗಳು ನಾದ ಮಾಡುತ್ತಿರುವಾಗ ಸಾಕೇತಪುರಂ=ಸಾಕೇತ ನಗರವನ್ನು ವಿವೇಶ=ಪ್ರವೇಶ ಮಾಡಿದನು.

ಆ ಭಾರದ್ವಾಜರ ಆತಿಥ್ಯವನ್ನು ಕೈಕೊಂಡು ಸಂತೋಷಭರಿತರಾದ ಭರತನಿಗೆ ಮುಂದೆ ನಡೆಯುತ್ತಿರುವ ಪುರಜನರಿಂದಲೂ, ಬಿಡಲ್ಪಟ್ಟ ಕರುಗಳಿಂದ ಕೂಡಿದ ಆಗ ತಾನೇ ಪ್ರಸವಿಸಿದ ಗೋವುಗಳಂತೆ ತೋರುವ ತಮ್ಮ ತಾಯಂದಿರಿಂದಲೂ, ನದೀಜಲವನ್ನು ತುಂಬಿದ ಸುವರ್ಣ ಕುಂಭಗಳನ್ನು ಹೊಂದಿದ ಮುನಿವರರುಗಳಿಂದಲೂ ಸ್ವಾಗತಿಸಲ್ಪಟ್ಟ ರಘುರಾಮನು ಮಂಗಳ ವಾದ್ಯಗಳು ಮೊಳಗುತ್ತಿರುವಾಗ ಸಾಕೇತಪುರವನ್ನು ಪ್ರವೇಶಿಸಿದನು.

ತತಶ್ಚತುಸ್ಸಾಗರ ವಾರಿಪೂರ್ಣೈಃ
ಸುವರ್ಣ ಕುಂಭೈಸ್ಸಹಜಾನಿಮೇನಂ
ಹಿರಣ್ಯ ಪಟ್ಟಾಮವಬಧ್ಯಫಾಲೇ
ವಸಿಷ್ಠಪೂರ್ವಾ ಮುನಯೋಭ್ಯಷಿಂಚನ್ ॥೨೬॥

ತತಃ=ನಂತರ ವಸಿಷ್ಠಪೂರ್ವಾಃ=ವಸಿಷ್ಠರೇ ಮೊದಲಾದ ಮುನಯಃ=ಮುನಿಶ್ರೇಷ್ಠರುಗಳು ಹಿರಣ್ಯಪಟ್ಟಂ=ಚಿನ್ನದ ಪಟ್ಟವನ್ನು ಫಾಲೇ=ಹಣೆಯಲ್ಲಿ ಅವಬಧ್ಯ=ಕಟ್ಟಿ ಚತುಸ್ಸಾಗರ ವಾರಿಪೂರ್ಣೈಃ=ನಾಲ್ಕು ಸಮುದ್ರಗಳ ನೀರಿನಿಂದ ತುಂಬಲ್ಪಟ್ಟ ಹಿರಣ್ಯ ಕುಂಭೈಃ=ಚಿನ್ನದ ಕಲಶಗಳಿಂದ ಸಹಜಾನಿಂ=ಹೆಂಡತಿಯ ಸಹಿತವಾದ ಏನಂ=ಈ ರಾಮನನ್ನು ಅಭ್ಯಷಿಂಚನ್=ಅಭಿಷೇಕಿಸಿದರು.

ನಂತರ ವಸಿಷ್ಠ ಮುಂತಾದ ಮುನಿಶ್ರೇಷ್ಠರು ಚಿನ್ನದ ಪಟ್ಟಿಯನ್ನು ಹಣೆಗೆ ಕಟ್ಟಿ ನಾಲ್ಕು ಸಾಗರಗಳ ನೀರನ್ನು ತುಂಬಿದ ಚಿನ್ನದ ಕುಂಭಗಳಿಂದ ಪತ್ನೀಸಮೇತನಾದ ಈ ರಾಮಚಂದ್ರನನ್ನು ಅಭಿಷೇಕ ಮಾಡಿದರು.

ಅಥಾರುಹ್ಯ ಭದ್ರಾಸನಂ ರಾಮಭದ್ರಃ
ಕಿರೀಟಂ ಕುಲಾಯಾತಮಾದಾಯಮೂರ್ಧ್ನಿ
ಸಸಮ್ಮಾನಯಾಮಾಸಸಮ್ಮಾನನೀಯಾನ್
ಮುನೀಶಾನ್ ಮಹೀಶಾನ್ ಕವೀಶಾನ್ ಕಪೀಶಾನ್ ॥೨೭॥

ಅಥ=ಅನಂತರ ಸಃ=ಆ ರಾಮಭದ್ರಃ=ರಾಮಚಂದ್ರನು ಭದ್ರಾಸನಂ=ಸಿಂಹಾಸನವನ್ನು ಆರುಹ್ಯ=ಆರೋಹಿಸಿ ಕುಲಾಯಾತಂ=ವಂಶಪಾರಂಪರಾನುಗತವಾಗಿ ಬಂದ ಕಿರೀಟಂ=ಕಿರೀಟವನ್ನು ಮೂರ್ಧ್ನಿ=ತಲೆಯಲ್ಲಿ ಆದಾಯ=ಹೊಂದಿದವನಾಗಿ ಸಮ್ಮಾನನೀಯಾನ್=ಗೌರವಕ್ಕೆ ತಕ್ಕವರಾದಂತಹ ಮುನೀಶಾನ್=ಋಷಿಶ್ರೇಷ್ಠರನ್ನೂ ಮಹೀಶಾನ್=ಕ್ಷತ್ರಿಯ ಶ್ರೇಷ್ಠರನ್ನೂ ಕಪೀಶಾನ್=ಕಪಿಶ್ರೇಷ್ಠರನ್ನೂ ಕವೀಶಾನ್=ಕವಿ ಶ್ರೇಷ್ಠರನ್ನೂ ಸಮ್ಮಾನಯಾಮಾಸ=ಸನ್ಮಾನ ಮಾಡಿದನು.

ಅನಂತರ ಆ ರಾಮಭದ್ರನು ಸಿಂಹಾಸನವನ್ನು ಆರೋಹಣ ಮಾಡಿ ವಂಶಪಾರಂಪರ್ಯವಾಗಿ ಬಂದ ಕಿರೀಟವನ್ನು ಶಿರದಲ್ಲಿ ಧರಿಸಿ ಗೌರವನೀಯವಾದ ಮುನಿಶ್ರೇಷ್ಠರು, ರಾಜಶ್ರೇಷ್ಠರು, ಕಪಿಶ್ರೇಷ್ಠರು ಮತ್ತು ಕವಿ ಶ್ರೇಷ್ಠರನ್ನು ಉಚಿತ ರೀತಿಯಿಂದ ಸನ್ಮಾನಿಸಿದನು.

ಇತಿ ಯುದ್ಧ ಕಾಂಡಃ

ಯುದ್ಧ ಕಾಂಡವು ಮುಗಿಯಿತು.

# ಅಥ ಉತ್ತರ ಕಾಂಡಃ

# ಉತ್ತರ ಕಾಂಡವು

ಸುಗ್ರೀವ ಪ್ರಮುಖಾನ್ ಸಖೀನ್ ಜನಪದಂ ಸ್ವೇ ಸ್ವೇ ಪ್ರತಿಷ್ಠಾಪಯನ್
ಪುತ್ರೌ ಪ್ರಾಪ್ಯ ಗುಣಾಧಿಕೌ ಕುಶಲವಾವಾನಂದ ಪೂರ್ಣಾಂತರಃ
ನಿತ್ಯಂ ಸಾದರ ಮಾಶ್ರಿತಃ ಸಹಸುತೈರ್ಲೋಕೋತ್ತರೈರ್ಭ್ರಾತೃಭಿಃ
ಮಾತೄಣಾಂ ಮುದಮಾವಹನ್ ಸಮಕರೋದ್ರಾಜ್ಯಂ ಸನಿಷ್ಕಂಟಕಂ ||೧||

ಸಃ=ಆವನು (ಆ ರಾಮಚಂದ್ರನು) ಸುಗ್ರೀವ ಪ್ರಮುಖಾನ್=ಸುಗ್ರೀವ ಮುಂತಾದ ಸಖೀನ್=ಮಿತ್ರರನ್ನು ಸ್ವೇ ಸ್ವೇಜನಪದೇ=ತಮ್ಮ ತಮ್ಮ ರಾಜ್ಯಗಳಲ್ಲಿ ಪ್ರತಿಷ್ಠಾಪಯನ್=ಇರುವಂತೆ ಮಾಡಿ ಗುಣಾಧಿಕೌ=ಅಧಿಕ ಗುಣಗಳಿಂದ ಕೂಡಿದ ಕುಶಲವೌ=ಲವಕುಶರೆಂಬ ಹೆಸರುಳ್ಳ ಪುತ್ರೌ=ಮಕ್ಕಳಿಬ್ಬರನ್ನು ಪ್ರಾಪ್ಯ=ಹೊಂದಿ ಆನಂದಪೂರ್ಣ ಅಂತರಃಸನ್=ಆನಂದದಿಂದ ಪರಿಪೂರ್ಣನಾಗಿ ಸಹಸುತೈಃ=ಮಕ್ಕಳೊಡಗೂಡಿ ಲೋಕೋತ್ತರೈಃ=ಪ್ರಪಂಚದಲ್ಲಿ ಉತ್ತಮರೆನಿಸಿದ ಭ್ರಾತೃಭಿಃ=ಸೋದರರಿಂದ ಆಶ್ರಿತಃ=ಸೇವಿಸಲ್ಪಟ್ಟವನಾಗಿ ಮಾತೄಣಾಂ=ತಾಯಿಯರಿಗೆ ಮುದಂ=ಸಂತೋಷವನ್ನು ಆವಹನ್=ಉಂಟು ಮಾಡುತ್ತಾ ನಿತ್ಯಂ=ಯಾವತ್ತಿಗೂ ಕೂಡ ನಿಷ್ಕಂಟಕಂ=ತೊಂದರೆಯಿಲ್ಲದಂತಹ ರಾಜ್ಯಂ=ರಾಜ್ಯವನ್ನು ಸಾದರಂ=ಶ್ರದ್ಧೆಯಿಂದ ಸಮಕರೋತ್=ಆಳಿದನು.

ಆ ರಾಮಚಂದ್ರನು ಸುಗ್ರೀವ ಮುಂತಾದ ಮಿತ್ರರುಗಳನ್ನು ತಮ್ಮ ತಮ್ಮ ರಾಜ್ಯಗಳಲ್ಲಿ ಸಂಸ್ಥಾಪಿಸಿ, ಅಧಿಕ ಗುಣಗಳಿಂದ ಕೂಡಿದ ಲವ ಕುಶರೆಂಬ ಮಕ್ಕಳಿಬ್ಬರನ್ನು ಪಡೆದು, ಆನಂದ ಪರಿಪೂರ್ಣನಾಗಿ, ಅವರ ಸಮೇತನಾಗಿ, ಪ್ರಪಂಚದಲ್ಲೇ ಉತ್ತಮರೆನಿಸಿದ ಸೋದರರಿಂದ ಸೇವಿಸಲ್ಪಟ್ಟು, ತಾಯಂದಿರಿಗೆ ಸಂತೋಷವನ್ನು ನೀಡುತ್ತಾ, ಯಾವಾಗಲೂ ತೊಂದರೆ ಇನಿತಿಲ್ಲದೆ ರಾಜ್ಯವನ್ನು ಶ್ರದ್ಧೆಯಿಂದ ಆಳಿದನು.

*ಇತಿ ಉತ್ತರ ಕಾಂಡಃ*

*ಉತ್ತರ ಕಾಂಡವು ಸಮಾಪ್ತಿಯಾಯಿತು.*

**ಓಂ ತತ್.**

ಇತಿ ವೈಯ್ಯಾಕರಣೇನ ಶ್ರೀಮದ್ರಾಮಾನುಜಾಭಿಧಾನೇನ
ರಚಿತಂ ರಾಮಾಯಣ ಸಂಗ್ರಹಂ ಮನುಗೃಹ್ಣಾತು ಜಾನಕೀಜಾನಿಃ ||

ಹೀಗೆ ವೈಯ್ಯಾಕರಣೀ ಶ್ರೀ ರಾಮಾನುಜಾಚಾರ್ಯರೆಂಬ ಅಭಿಧಾನವುಳ್ಳವರಿಂದ ರಚಿಸಲ್ಪಟ್ಟ ರಾಮಾಯಣ ಸಂಗ್ರಹವನ್ನು ಜಾನಕೀಜಾನಿಯಾದ ಶ್ರೀ ರಾಮಚಂದ್ರನು ಅನುಗ್ರಹಿಸಲಿ.

*ಮಂಗಳಂ ಕೋಸಲೇಂದ್ರಾಯ ಮಹನೀಯ ಗುಣಾಬ್ಧಯೇ*
*ಚಕ್ರವರ್ತಿ ತನೂಜಾಯ ಸಾರ್ವಭೌಮಾಯ ಮಂಗಳಮ್*

- ಶ್ರೀ ರಾಮಾರ್ಪಣಮಸ್ತು -

# ಶ್ರೀರಾಮ ಪಟ್ಟಾಭಿಷೇಕ
# ಸ್ತೋತ್ರಗಳು

ವಾಮೇ ಭೂಮಿಸುತಾ ಪುರಶ್ಚ ಹನುಮಾನ್
ಪಶ್ಚಾತ್ ಸುಮಿತ್ರಾಸುತಃ
ಶತ್ರುಘ್ನೋ ಭರತಶ್ಚ ಪಾರ್ಶ್ವ ದಳಯೋಃ
ವಾಯ್ವಾದಿಕೋಣೇಷ್ವಪಿ
ಸುಗ್ರೀವಶ್ಚ ವಿಭೀಷಣಶ್ಚ ಯುವರಾಟ್
ತಾರಾಸುತೋ ಜಾಂಬವಾನ್
ಮಧ್ಯೇ ನೀಲ ಸರೋಜ ಕೋಮಲ ರುಚಿಂ
ಶ್ರೀರಾಮಚಂದ್ರಂ ಭಜೇ ॥

ವೈದೇಹೀ ಸಹಿತಂ ಸುರದ್ರುಮತಲೇ
ಹೈಮೇ ಮಹಾಮಂಟಪೇ
ಮಧ್ಯೇ ಪುಷ್ಪಕಮಾಸನೇ ಮಣಿಮಯೇ
ವೀರಾಸನೇ ಸಂಸ್ಥಿತಮ್
ಅಗ್ರೇವಾಚಯತಿ ಪ್ರಭಂಜನ ಸುತೇ
ತತ್ವಂ ಮುನಿಭ್ಯಃ ಪರಂ
ವ್ಯಾಖ್ಯಾಂತಂ ಭರತಾದಿಭಿಃ ಪರಿವೃತಂ
ರಾಮಂ ಭಜೇ ಶ್ಯಾಮಲಮ್ ॥

---

# ಏಕಶ್ಲೋಕೀ ರಾಮಾಯಣಮ್

ಪೂರ್ವಂ ರಾಮ ತಪೋವನಾನುಗಮನಂ
ಹತ್ವಾ ಮೃಗಮ್ ಕಾಂಚನಮ್
ವೈದೇಹೀ ಹರಣಮ್ ಜಟಾಯು ಮರಣಮ್
ಸುಗ್ರೀವಸಂಭಾಷಣಮ್
ವಾಲೀ ನಿಗ್ರಹಣಮ್ ಸಮುದ್ರತರಣಮ್
ಲಂಕಾಪುರೀ ದಾಹನಮ್
ಪಶ್ಚಾದ್‌ರಾವಣ ಕುಂಭಕರ್ಣಮಥನಮ್
ಏತದ್ಧಿ ರಾಮಾಯಣಮ್ ॥

# ಮಂಗಳಂ

ಮಂಗಳಂ ಕೋಸಲೇಂದ್ರಾಯ ಮಹನೀಯ ಗುಣಾಬ್ಧಯೇ
ಚಕ್ರವರ್ತಿ ತನೂಜಾಯ ಸಾರ್ವಭೌಮಾಯ ಮಂಗಳಂ ॥

ವೇದವೇದಾಂತ ವೇದ್ಯಾಯ ಮೇಘಶ್ಯಾಮಲಮೂರ್ತಯೇ
ಪುಂಸಾಂ ಮೋಹನ ರೂಪಾಯ ಪುಣ್ಯಶ್ಲೋಕಾಯ ಮಂಗಳಂ ॥

ವಿಶ್ವಾಮಿತ್ರಾಂತರಂಗಾಯ ಮಿಥಿಲಾನಗರೀಪತೇ
ಭಾಗ್ಯಾನಾಂ ಪರಿಪಾಕಾಯ ಭವ್ಯರೂಪಾಯ ಮಂಗಳಂ ॥

ಪಿತೃಭಕ್ತಾಯ ಸತತಂ ಭ್ರಾತೃಭಿಃ ಸಹಸೀತಯಾ
ನಂದಿತಾಖಿಲ ಲೋಕಾಯ ರಾಮಭದ್ರಾಯ ಮಂಗಳಂ ॥

ತ್ಯಕ್ತಸಾಕೇತವಾಸಾಯ ಚಿತ್ರಕೂಟ ವಿಹಾರಿಣೇ
ಸೇವ್ಯಾಯ ಸರ್ವಯಮಿನಾಂ ಧೀರೋದಾರಾಯ ಮಂಗಳಂ ॥

ಸೌಮಿತ್ರಿಣಾಚಜಾನಕ್ಯಾ ಚಾಪಬಾಣಾಸಿಧಾರಿಣೇ
ಸಂಸೇವ್ಯಾಯ ಸದಾಭಕ್ತ್ಯಾ ಸ್ವಾಮಿನೇ ಮಮ ಮಂಗಳಂ ॥

ದಂಡಕಾರಣ್ಯವಾಸಾಯ ಖಂಡಿತಾಮರಶತ್ರವೇ
ಗೃಧ್ರರಾಜಾಯಭಕ್ತಾಯ ಮುಕ್ತಿದಾಯಾಸ್ತು ಮಂಗಳಂ ॥

ಸಾದರಂ ಶಬರೀದತ್ತ ಫಲಮೂಲಾಭಿಲಾಷಿಣೇ
ಸೌಲಭ್ಯ ಪರಿಪೂರ್ಣಾಯ ಸತ್ವೋದ್ರಿಕ್ತಾಯ ಮಂಗಳಂ ॥

ಹನುಮತ್ಸಮವೇತಾಯ ಹರೀಶಾಭೀಷ್ಟದಾಯಿನೇ
ವಾಲಿಪ್ರಮಥನಾಯಾಸ್ತು ಮಹಾಧೀರಾಯ ಮಂಗಳಂ ॥

ಶ್ರೀಮತೇ ರಘುವೀರಾಯ ಸೇತೂಲ್ಲಂಘಿತಸಿಂಧವೇ
ಜಿತರಾಕ್ಷಸರಾಜಾಯ ರಣಧೀರಾಯ ಮಂಗಳಂ ॥

ಆಸಾದ್ಯನಗರೀಂ ದಿವ್ಯಾಂ ಅಭಿಷಿಕ್ತಾಯ ಸೀತಯಾ
ರಾಜಾಧಿರಾಜರಾಜಾಯ ರಾಮಭದ್ರಾಯ ಮಂಗಳಂ ॥

ಮಂಗಳಾಶಾಸನ ಪರೈಃ ಮದಾಚಾರ್ಯ ಪುರೋಗಮೈಃ
ಸರ್ವೈಶ್ಚಪೂರ್ವೈರಾಚಾರ್ಯೈಃ ಸತ್ಕೃತಾಯಾಸ್ತು ಮಂಗಳಂ ॥

*ಶ್ರೀ ಸೀತಾಲಕ್ಷ್ಮಣಭರತ ಶತ್ರುಘ್ನ ಹನುಮತ್ ಸಮೇತ*
*ಶ್ರೀ ರಾಮಚಂದ್ರ ಪರಬ್ರಹ್ಮಣೇ ನಮಃ*

---